|| ಶ್ರೀ: ||
|| ಶ್ರೀ ಗುರುಭ್ಯೋ ನಮ: ||
|| ಶ್ರೀ ಪರಮ ಗುರುಭ್ಯೋ ನಮ: ||
|| ಶ್ರೀ ಜಗನ್ನಾಥ ದಾಸ ಗುರುಭ್ಯೋ ನಮ: ||
|| ಶ್ರೀ ಪುರಂದರ ದಾಸ ಗುರುಭ್ಯೋ ನಮ: ||
|| ಶ್ರೀ ವ್ಯಾಸರಾಯ ಗುರುಭ್ಯೋ ನಮ: ||
|| ಲಾತವ್ಯ ಚಕ್ರವರ್ತಿ ಭಾವಿ ಸಮೀರ ಶ್ರೀ ವಾದಿರಾಜ ಗುರುಭ್ಯೋ ನಮ: ||
|| ಶ್ರೀಮದಾನಂದ ತೀರ್ಥ ಗುರುಭ್ಯೋ ನಮ: ||
|| ಶ್ರೀ ವೇದವ್ಯಾಸಾಯ ನಮ: ||
|| ಅರಿಷ್ಟ ನಿರಸನಾತ್ಮಕ ಶ್ರೀ ಲಕ್ಷ್ಮೀ ನೃಸಿಂಹಾಯ ನಮ: ||
|| ಇಷ್ಟ ಪ್ರದಾಯಕ ಶ್ರೀ ಲಕ್ಷ್ಮೀ ವೇಂಕಟೇಶಾಯ ನಮ: ||

**ಶ್ರೀ ಜಗನ್ನಾಥ ದಾಸವರ್ಯ ವಿರಚಿತ**

# ಶ್ರೀ ಹರಿಕಥಾಮೃತಸಾರ

**(ಕನ್ನಡ ಲಿಪಿ)**

| | | |
|---|---|---|
| ೧. ಶ್ರೀ ಮಂಗಳಾಚರಣ ಸಂಧಿ | _______ | ೧ |
| ೨. ಶ್ರೀ ಕರುಣಾ ಸಂಧಿ | _______ | ೫ |
| ೩. ಶ್ರೀ ವ್ಯಾಪ್ತಿ ಸಂಧಿ | _______ | ೯ |
| ೪. ಶ್ರೀ ಭೋಜನ ಸಂಧಿ | _______ | ೧೪ |
| ೫. ಶ್ರೀ ವಿಭೂತಿ ಸಂಧಿ | _______ | ೧೯ |
| ೬. ಶ್ರೀ ಪಂಚಮಹಾಯಜ್ಞ ಸಂಧಿ | _______ | ೨೫ |
| ೭. ಶ್ರೀ ಪಂಚತನ್ಮಾತ್ರ ಸಂಧಿ | _______ | ೩೦ |
| ೮. ಶ್ರೀ ಮಾತೃಕಾ ಸಂಧಿ | _______ | ೩೫ |
| ೯. ಶ್ರೀ ವರ್ಣಪ್ರಕ್ರಿಯ ಸಂಧಿ | | |
| ೯. ಶ್ರೀ ಉದಾತ್ತ ಅನುದಾತ್ತ ಸಂಧಿ | _______ | ೪೦ |
| ೧೦. ಶ್ರೀ ಸರ್ವಪ್ರತೀಕ ಸಂಧಿ | _______ | ೪೫ |
| ೧೧. ಶ್ರೀ ಧ್ಯಾನಪ್ರಕ್ರಿಯ ಸಂಧಿ | | |
| ೧೧. ಶ್ರೀ ಸ್ಥಾವರಜಂಗಮ ಸಂಧಿ | _______ | ೪೯ |
| ೧೨. ಶ್ರೀ ನಾಡೀಪ್ರಕರಣ ಸಂಧಿ | _______ | ೫೪ |
| ೧೩. ಶ್ರೀ ನಾಮಸ್ಮರಣ ಸಂಧಿ | _______ | ೬೦ |
| ೧೪. ಶ್ರೀ ಪಿತೃಗಣ ಸಂಧಿ | | |
| ೧೪. ಶ್ರೀ ಜೀವನ ಪ್ರಕ್ರಿಯ ಸಂಧಿ | _______ | ೬೫ |
| ೧೫. ಶ್ರೀ ಶ್ವಾಸ ಸಂಧಿ | _______ | ೭೦ |
| ೧೬. ಶ್ರೀ ದತ್ತಸ್ವಾತಂತ್ರ್ಯ ಸಂಧಿ | _______ | ೭೫ |
| ೧೭. ಶ್ರೀ ಸ್ವಗತಸ್ವಾತಂತ್ರ್ಯ ಸಂಧಿ | _______ | ೮೦ |
| ೧೮. ಶ್ರೀ ಬಿಂಬಾಪರೋಕ್ಷ ಸಂಧಿ | | |
| ೧೮. ಶ್ರೀ ಬಿಂಬೋಪಾಸನ ಸಂಧಿ | | |
| ೧೮. ಶ್ರೀ ಬಿಂಬ ಪ್ರತಿಬಿಂಬ ಸಂಧಿ | _______ | ೮೩ |
| ೧೯. ಶ್ರೀ ಗುಣತಾರತಮ್ಯ ಸಂಧಿ | _______ | ೮೭ |
| ೨೦. ಶ್ರೀ ಆರೋಹಣ ತಾರತಮ್ಯ ಸಂಧಿ | _______ | ೯೨ |
| ೨೧. ಶ್ರೀ ಕರ್ಮವಿಮೋಚನ ಸಂಧಿ | _______ | ೯೫ |
| ೨೨. ಶ್ರೀ ಭಕ್ತಾಪರಾಧಸಹಿಷ್ಣು ಸಂಧಿ | _______ | ೧೦೦ |
| ೨೩. ಶ್ರೀ ಬೃಹತ್ತಾರತಮ್ಯ ಸಂಧಿ | | |
| ೨೩. ಆವೇಶ–ಅವತಾರ ತಾರತಮ್ಯ ಸಂಧಿ | _______ | ೧೦೫ |
| ೨೪. ಶ್ರೀ ಕಲ್ಪಸಾಧನ ಸಂಧಿ | | |
| ೨೪. ಶ್ರೀ ಅಪರೋಕ್ಷ ತಾರತಮ್ಯ ಸಂಧಿ | _______ | ೧೧೪ |
| ೨೫. ಶ್ರೀ ಕ್ರೀಡಾವಿಲಾಸ ಸಂಧಿ | | |
| ೨೫. ಶ್ರೀ ಸರ್ವ ಸ್ವಾತಂತ್ರ್ಯ ಸಂದಿ | _______ | ೧೨೩ |
| ೨೬. ಶ್ರೀ ಅವರೋಹಣ ತಾರತಮ್ಯ ಸಂಧಿ | _______ | ೧೨೯ |
| ೨೭. ಶ್ರೀ ಅನುಕ್ರಮಣಿಕಾ ತಾರತಮ್ಯ ಸಂಧಿ | _______ | ೧೩೧ |
| ೨೮. ಶ್ರೀ ವಿಘ್ನೇಶ್ವರ ಸ್ತೋತ್ರ ಸಂಧಿ | | |
| ೨೮. ಶ್ರೀ ಗಣಪತಿ ಸ್ತೋತ್ರ ಸಂಧಿ | _______ | ೧೩೨ |
| ೨೯. ಶ್ರೀ ಅಣುತಾರತಮ್ಯ ಸಂಧಿ | _______ | ೧೩೫ |
| ೩೦. ಶ್ರೀ ದೈತ್ಯತಾರತಮ್ಯ ಸಂಧಿ | _______ | ೧೩೮ |
| ೩೧. ಶ್ರೀ ನೈವೇದ್ಯಪ್ರಕರಣ ಸಂಧಿ | _______ | ೧೪೨ |
| ೩೨. ಶ್ರೀ ಕಕ್ಷಾತಾರತಮ್ಯ ಸಂಧಿ | _______ | ೧೪೬ |
| ೩೩. ಶ್ರೀ ಫಲಶ್ರುತಿ ಸಂಧಿ | | |
| ೩೩. ಶ್ರೀ ಫಲಸ್ತುತಿ ಸಂಧಿ | _______ | ೧೫೪ |

॥ ಶ್ರೀ: ॥

## ॥ ೧. ಶ್ರೀ ಮಂಗಳಾಚರಣ ಸಂಧಿ ॥

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ,
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥

ಶ್ರೀರಮಣಿ ಕರಕಮಲ ಪೂಜಿತ ಚಾರುಚರಣ ಸರೋಜ,
ಬ್ರಹ್ಮ ಸಮೀರ ವಾಣಿ ಫಣೀಂದ್ರ ವೀಂದ್ರ ಭವೇಂದ್ರ ಮುಖ ವಿನುತ,।
ನೀರಜ ಭವಾಂಡೋದಯ ಸ್ಥಿತಿ ಕಾರಣನೆ, ಕೈವಲ್ಯ ದಾಯಕ ನಾರಸಿಂಹನೆ ನಮಿಪೆ,
ಕರುಣಿಪುದೆಮಗೆ ಮಂಗಳವ ॥ ೧ ॥

ಜಗದುದರನತಿವಿಮಲ ಗುಣರೂಪಗಳನು,
ಆಲೋಚನದಿ ಭಾರತ ನಿಗಮತತಿಗಳತಿಕ್ರಮಿಸಿ ಕ್ರಿಯಾವಿಶೇಷಗಳ,
ಬಗೆ ಬಗೆಯ ನೂತನವ ಕಾಣುತ, ಮಿಗೆ ಹರುಷದಿಂ ಪೊಗಳಿ ಹಿಗ್ಗುವ,
ತ್ರಿಗುಣಮಾನಿ ಮಹಾಲಕುಮಿ ಸಂತೈಸಲನುದಿನವು ॥ ೨ ॥

ನಿರುಪಮಾನಂದಾತ್ಮ, ಭವ ನಿರ್ಜರಸಭಾಸಂಸೇವ್ಯ,
ಋಜುಗಣದರಸೆ, ಸತ್ವಪ್ರಚುರ, ವಾಣೀಮುಖಸರೋಜೇನ,
ಗರುಡ ಶೇಷ ಶಶಾಂಕದಳ ಶೇಖರರ ಜನಕ, ಜಗದ್ಗುರುವೇ,
ತ್ವಚ್ಚರಣಗಳಿಗಭಿವಂದಿಸುವೆ, ಪಾಲಿಪುದು ಸನ್ಮತಿಯ ॥ ೩ ॥

ಆರುಮೂರೆರಡೊಂದು ಸಾವಿರ ಮೂರೆರಡು ಶತಶ್ವಾಸ ಜಪಗಳ,
ಮೂರು ವಿಧ ಜೀವರೊಳಗಬ್ಜಜಕಲ್ಪ ಪರಿಯಂತ ತಾ ರಚಿಸಿ,
ಸತ್ವರಿಗೆ ಸುಖ, ಸಂಸಾರ ಮಿಶ್ರರಿಗೆ,
ಅಧಮಜನರಿಗಪಾರ ದು:ಖಗಳೀವ, ಗುರು ಪವಮಾನ ಸಲಹೆಮ್ಮ ॥ ೪ ॥

ಚತುರವದನನ ರಾಣಿ, ಅತಿರೋಹಿತ ವಿಮಲ ವಿಜ್ಞಾನಿ,
ನಿಗಮಪ್ರತತಿಗಳಿಗಭಿಮಾನಿ, ವೀಣಾಪಾಣಿ, ಬ್ರಹ್ಮಾಣಿ,
ನತಿಸಿ ಬೇಡುವೆ ಜನನಿ, ಲಕ್ಷ್ಮೀಪತಿಯ ಗುಣಗಳ ತುತಿಪುದಕೆ ಸನ್ಮತಿಯ ಪಾಲಿಸಿ,
ನೆಲೆಸು ನೀ ಮದ್ವದನ ಸದನದಲಿ ॥ ೫ ॥

ಕೃತಿರಮಣ ಪ್ರದ್ಯುಮ್ನ ನಂದನೆ,
ಚತುರವಿಂಶತಿ ತತ್ವಪತಿ ದೇವತೆಗಳಿಗೆ ಗುರುವೆನಿಸುತಿಹ ಮಾರುತನ ನಿಜಪತ್ನಿ,
ಸತತ ಹರಿಯಲಿ ಗುರುಗಳಲಿ ಸದ್ರತಿಯ ಪಾಲಿಸಿ,
ಭಾಗವತ ಭಾರತ ಪುರಾಣ ರಹಸ್ಯ ತತ್ವಗಳರುಪು ಕರುಣದಲಿ ॥ ೬ ॥

ವೇದಪೀಠ ವಿರಿಂಚಿ ಭವ ಶಕ್ರಾದಿ ಸುರ ವಿಜ್ಞಾನ ದಾಯಕ,।
ಮೋದಚಿನ್ಮಯಗಾತ್ರ, ಲೋಕಪವಿತ್ರ, ಸುಚರಿತ್ರ,
ಛೇದ ಭೇದ ವಿಷಾದಕುಟಿಲಾಂತಾದಿ ಮಧ್ಯವಿದೂರ,
ಆದಾನಾದಿಕಾರಣ ಬಾದರಾಯಣ ಪಾಹಿ ಸತ್ರಾಣ ॥ ೭ ॥

ಕ್ಷಿತಿಯೊಳಗೆ ಮಣಿಮಂತ ಮೊದಲಾದತಿ ದುರಾತ್ಮರು,
ಒಂದಧಿಕ ವಿಂಶತಿ ಕುಭಾಷ್ಯವ ರಚಿಸೆ,
ನಡುಮನೆಯೆಂಬ ಬ್ರಾಹ್ಮಣನ ಸತಿಯು ಜಠರದೊಳವತರಿಸಿ,
ಭಾರತಿರಮಣ ಮಧ್ವಾಭಿಧಾನದಿ, ಚತುರದಶ ಲೋಕದಲಿ ಮೆರೆದ ಅಪ್ರತಿಮಗೊಂದಿಸುವೆ ॥ ೮ ॥

ಪಂಚಭೇದಾತ್ಮಕ ಪ್ರಪಂಚಕೆ ಪಂಚರೂಪಾತ್ಮಕನೆ ದೈವಕ,
ಪಂಚಮುಖ ಶಕ್ರಾದಿಗಳು ಕಿಂಕರರು ಶ್ರೀಹರಿಗೆ,
ಪಂಚವಿಂಶತಿ ತತ್ವ ತರತಮ ಪಂಚಿಕೆಗಳನು ಪೇಳ್ದ,
ಭಾವಿ ವಿರಿಂಚಿಯೆನಿಪಾನಂದತೀರ್ಥರ ನೆನೆವೆನನುದಿನವು ॥ ೯ ॥

ವಾಮದೇವ, ವಿರಿಂಚಿತನಯ, ಉಮಾಮನೋಹರ, ಉಗ್ರ, ಧೂರ್ಜಟಿ,
ಸಾಮಜಾಜಿನ ವಸನ ಭೂಷಣ, ಸುಮನಸೋತ್ತಂಸ,
ಕಾಮಹರ, ಕೈಲಾಸ ಮಂದಿರ, ಸೋಮಸೂರ್ಯಾನಲ ವಿಲೋಚನ,
ಕಾಮಿತಪ್ರದ, ಕರುಣಿಸೆಮಗೆ ಸದಾ ಸುಮಂಗಲವ ॥ ೧೦ ॥

ಕೃತ್ತಿವಾಸನೆ ಹಿಂದೆ ನೀ ನಾಲ್ವತ್ತು ಕಲ್ಪಸಮೀರನಲಿ
ಶಿಷ್ಯತ್ವ ವಹಿಸ್ಯಖಿಳಾಗಮಾರ್ಥಗಳೋದಿ,
ಜಲಧಿಯೊಳು ಹತ್ತು ಕಲ್ಪದಿ ತಪವ ಗೈದು, ಆದಿತ್ಯರೊಳಗುತ್ತಮನೆನಿಸಿ,
ಪುರುಷೋತ್ತಮನ ಪರಿಯಂಕ ಪದವೈದಿದೆಯೋ ಮಹದೇವ ॥ ೧೧ ॥

ಪಾಕಶಾಸನ ಮುಖ್ಯ ಸಕಲ ದಿವೌಕಸರಿಗಭಿನಮಿಪೆ, ಋಷಿಗಳಿಗೆ,
ಏಕ ಚಿತ್ತದಿ ಪಿತೃಗಳಿಗೆ, ಗಂಧರ್ವ ಕ್ಷಿತಿಪರಿಗೆ,
ಆ ಕಮಲನಾಭಾದಿ ಯತಿಗಳನೀಕಕಾನಮಿಸುವೆನು ಬಿಡದೆ,
ರಮಾ ಕಳತ್ರನ ದಾಸವರ್ಗಕೆ ನಮಿಪೆನನವರತ ॥ ೧೨ ॥

ಪರಿಮಳವು ಸುಮನದೊಳಗೆ, ಅನಲನು ಅರಣಿಯೊಳಗಿಪ್ಪಂತೆ,
ದಾಮೋದರನು ಬ್ರಹ್ಮಾದಿಗಳ ಮನದಲಿ ತೋರಿತೋರದಲೆ ಇರುತಿಹ,
ಜಗನ್ನಾಥ ವಿಠಲನ ಕರುಣ ಪಡೆವ ಮುಮುಕ್ಷುಜೀವರು,
ಪರಮ ಭಾಗವತರನು ಕೊಂಡಾಡುವುದು ಪ್ರತಿದಿನವು ॥ ೧೩ ॥

॥ ಇತಿ ಶ್ರೀ ಮಂಗಳಾಚರಣ ಸಂಧಿ ಸಂಪೂರ್ಣಂ ॥

॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

## ॥ ೨. ಶ್ರೀ ಕರುಣಾ ಸಂಧಿ ॥

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ,
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥

ಶ್ರವಣ ಮನಕಾನಂದವೀವುದು, ಭವಜನಿತ ದು:ಖಗಳ ಕಳೆವುದು,
ವಿವಿಧ ಭೋಗಗಳಿಹಪರಂಗಳಲಿತ್ತು ಸಲಹುವುದು,
ಭುವನ ಪಾವನವೆನಿಪ ಲಕ್ಷ್ಮೀ ಧವನ ಮಂಗಳ ಕಥೆಯ,
ಪರಮೋತ್ಸವದಿ ಕಿವಿಗೊಟ್ಟಾಲಿಪುದು ಭೂಸುರರು ದಿನದಿನದಿ ॥ ೧ ॥

ಮಳೆಯ ನೀರೋಣಿಯೊಳು ಪರಿಯಲು ಬಳಸರೂರೊಳಗಿದ್ದ ಜನರು
ಆ ಜಲವು ಹೆದ್ದೊರೆಗೂಡೆ ಮಜ್ಜನಪಾನ ಗೈದಪರು,
ಕಲುಷ ವಚನಗಳಾದಡೆಯು ಬಾಂಬೊಳೆಯ ಪೆತ್ತನ ಪಾದ ಮಹಿಮ
ಆ ಜಲಧಿ ಪೊಕ್ಕದರಿಂದ ಮಾಣ್ದಪರೇ ಮಹೀಸುರರು ॥ ೨ ॥

ಶ್ರುತಿತತಿಗಳಭಿಮಾನಿ ಲಕ್ಷ್ಮೀ ಸ್ತುತಿಗಳಿಗೆ ಗೋಚರಿಸದ,
ಅಪ್ರತಿಹತ ಮಹೈಶ್ವರ್ಯಾದ್ಯಖಿಳ ಸದ್ಗುಣ ಗಣಾಂಭೋಧಿ,
ಪ್ರತಿದಿವಸ ತನ್ನಂಘ್ರಿಸೇವಾರತ ಮಹಾತ್ಮರು ಮಾಡುತಿಹ ಸಂಸ್ತುತಿಗೆ,
ವಶನಾಗುವನಿವನ ಕಾರುಣ್ಯಕೇನೆಂಬೆ ॥ ೩ ॥

ಮನವಚನಕತಿದೂರ ನೆನೆವರನನುಸರಿಸಿ ತಿರುಗುವನು ಜಾಹ್ನವಿ ಜನಕ,
ಜಗದೊಳಗಿದ್ದು ಜನಿಸುವ ಜಗದುದರ ತಾನು,
ಘನಮಹಿಮ ಗಾಂಗೇಯನುತ, ಗಾಯನವ ಕೇಳುತ ಗಗನ ಚರ ವಾಹನ,
ದಿವೌಕಸರೊಡನೆ ಚರಿಸುವ ಮನೆಮನೆಗಳಲ್ಲಿ ॥ ೪ ॥

ಮಲಗಿ ಪರಮಾದರದಿ ಪಾಡಲು ಕುಳಿತು ಕೇಳುವ,
ಕುಳಿತು ಪಾಡಲು ನಿಲುವ, ನಿಂತರೆ ನಲಿವ, ನಲಿದರೆ ಒಲಿವೆ, ನಿಮಗೆಂಬ,
ಸುಲಭನೋ ಹರಿ ತನ್ನವರನರಘಳಿಗೆ ಬಿಟ್ಟಗಲನು,
ರಮಾಧವನೊಲಿಸಲರಿಯದೆ ಪಾಮರರು ಬಳಲುವರು ಭವದೋಳಗೆ ॥ ೫ ॥

ಮನದೊಳಗೆ ತಾನಿದ್ದು ಮನವೆಂದೆನಿಸಿಕೊಂಬನು,
ಮನದ ವೃತ್ತಿಗಳನುಸರಿಸಿ ಭೋಗಂಗಳೀವನು ತ್ರಿವಿಧ ಚೇತನಕೆ,
ಮನವನಿತ್ತರೆ ತನ್ನ ನೀವನು,
ತನುವ ದಂಡಿಸಿ ದಿನದಿನದಿ ಸಾಧನವ ಮಾಳ್ಪರಿಗಿತ್ತಪನು ಸ್ವರ್ಗಾದಿಭೋಗಗಳ ॥ ೬ ॥

ಪರಮ ಸತ್ಪುರುಷಾರ್ಥರೂಪನು ಹರಿಯು ಲೋಕಕೆ ಎಂದು,
ಪರಮಾದರದಿ ಸದುಪಾಸನೆಯ ಗೈವರಿಗಿತ್ತಪನು ತನ್ನ,
ಮರೆದು ಧರ್ಮಾರ್ಥಗಳಕಾಮಿಸುವರಿಗೆ ನಗುತತಿಶೀಘ್ರದಿಂದಲಿ,
ಸುರಪತನಯ–ಸುಯೋಧನರಿಗಿತ್ತಂತೆ ಕೊಡುತಿಪ್ಪ ॥ ೭ ॥

ಜಗವನೆಲ್ಲವ ನಿರ್ಮಿಸುವ ನಾಲ್ಮೊಗನೊಳಗೆ ತಾನಿದ್ದು, ಸಲಹುವ,
ಗಗನಕೇಶನೊಳಿದ್ದು ಸಂಹರಿಸುವನು ಲೋಕಗಳ,
ಸ್ವಗತ ಭೇದ ವಿವರ್ಜಿತನು, ಸರ್ವಗ, ಸದಾನಂದೈಕ ದೇಹನು,
ಬಗೆಬಗೆಯ ನಾಮದಲಿ ಕರೆಸುವ, ಭಕುತರನು ಪೊರೆವ ॥ ೮ ॥

ಒಬ್ಬನಲಿ ನಿಂದಾಡುವನು, ಮತ್ತೊಬ್ಬನಲಿ ನೋಡುವನು,
ಬೇಡುವನೊಬ್ಬನಲಿ, ನೀಡುವನು, ಮಾತಾಡುವನು ಬೆರಗಾಗಿ,
ಅಬ್ಬರದ ಹೆದ್ದೈವನಿವ, ಮತ್ತೊಬ್ಬರನ ಲೆಕ್ಕಿಸನು,
ಲೋಕದೊಳೊಬ್ಬನೇ ತಾ ಬಾಧ್ಯ ಬಾಧಕನಾಹ ನಿರ್ಭೀತ ॥ ೯ ॥

ಶರಣಜನ ಮಂದಾರ, ಶಾಶ್ವತ ಕರುಣಿ, ಕಮಲಾಕಾಂತ, ಕಾಮದ,
ಪರಮ ಪಾವನತರ, ಸುಮಂಗಳ ಚರಿತ, ಪಾರ್ಥಸಖ,
ನಿರುಪಮಾನಂದಾತ್ಮ, ನಿರ್ಗತ ದುರಿತ, ದೇವವರೇಣ್ಯನೆಂದಾದರದಿ ಕರೆಯಲು,
ಬಂದೊದಗುವನು ತನ್ನವರ ಬಳಿಗೆ ॥ ೧೦ ॥

ಜನನಿಯನು ಕಾಣದಿಹ ಬಾಲಕ ನೆನೆನೆನೆದು ಹಲುಬುತಿರೆ,
ಕತ್ತಲೆ ಮನೆಯೊಳಡಗಿದ್ದವನ ನೋಡುತ ನಗುತ ಹರುಷದಲಿ,
ತನಯನಂ ಬಿಗಿದಪ್ಪಿ ರಂಬಿಸಿ ಕನಲಿಕೆಯ ಕಳೆವಂತೆ,
ಮಧುಸೂದನನು ತನ್ನವರಿದ್ದೆಡೆಗೆ ಬಂದೊದಗಿ ಸಲಹುವನು ॥ ೧೧ ॥

ಇಟ್ಟಿಕಲ್ಲನು ಭಕುತಿಯಿಂದಲಿ ಕೊಟ್ಟ ಭಕುತಗೆ ಮೆಚ್ಚಿ ತನ್ನನೆ ಕೊಟ್ಟ,
ಬಡಬ್ರಾಹ್ಮಣನ ಒಪ್ಪಿಡಿಯವಲಿಗಖಿಳಾರ್ಥ,
ಕೆಟ್ಟ ಮಾತುಗಳೆಂದ ಚೈದ್ಯನ ಪೊಟ್ಟೆಯೊಳಗಿಂಬಿಟ್ಟ,
ಬಾಣದಲಿಟ್ಟ ಭೀಷ್ಮನವಗುಣಗಳೆಣಿಸಿದನೇ ಕರುಣಾಳು ॥ ೧೨ ॥

ಧನವ ಸಂರಕ್ಷಿಸುವ ಫಣಿ ತಾನುಣದೆ, ಮತ್ತೊಬ್ಬರಿಗೆ ಕೊಡದೆ,
ಅನುದಿನದಿ ನೋಡುತ ಸುಖಿಸುವಂದದಿ,
ಲಕುಮಿವಲ್ಲಭನು ಪ್ರಣತರನು ಕಾಯ್ದಿಹನು ನಿಷ್ಕಾಮನದಿ,
ನಿತ್ಯಾನಂದಮಯ, ದುರ್ಜನರ ಸೇವೆಯನೊಲ್ಲನಪ್ರತಿಮಲ್ಲ ಜಗಕೆಲ್ಲ ॥ ೧೩ ॥

ಬಾಲಕನ ಕಲಭಾಷೆ ಜನನಿ ಕೇಳಿ ಸುಖಪಡುವಂತೆ,
ಲಕ್ಷ್ಮೀಲೋಲ ಭಕ್ತರು ಮಾಡುತಿಹ ಸಂಸ್ತುತಿಗೆ ಹಿಗ್ಗುವನು,
ತಾಳ-ತನ್ನವರಲ್ಲಿ ಮಾಡ್ವವಹೇಳನವ ಹೆದ್ದೈವ,
ವಿದುರನ ಆಲಯದಿ ಪಾಲುಂಡು ಕುರುಪನ ಮಾನವನೆ ಕೊಂಡ ॥ ೧೪ ॥

ಸ್ಮರಿಸುವವರಪರಾಧಗಳ ತಾ ಸ್ಮರಿಸ, ಸಕಲೇಷ್ಟ ಪ್ರದಾಯಕ,
ಮರಳಿ ತನಗರ್ಪಿಸಲು ಕೊಟ್ಟುದನಂತಮಡಿ ಮಾಡಿ ಪರಿಪರಿಯಲಿಂದುಣಿಸಿ,
ಸುಖಸಾಗರದಿ ಲೋಲಾಡಿಸುವ, ಮಂಗಳ ಚರಿತ,
ಚಿನ್ಮಯಗಾತ್ರ, ಲೋಕಪವಿತ್ರ, ಸುಚರಿತ್ರ ॥ ೧೫ ॥

ಏನು ಕರುಣಾನಿಧಿಯೋ ಹರಿ, ಮತ್ತೇನು ಭಕ್ತಾಧೀನನೋ,
ಇನ್ನೇನು ಈತನ ಲೀಲೆ, ಇಚ್ಛಾಮಾತ್ರದಲಿ ಜಗವ ತಾನೆ ಸೃಜಿಸುವ, ಪಾಲಿಸುವ,
ನಿರ್ವಾಣ ಮೊದಲಾದಖಿಳ ಲೋಕಸ್ಥಾನದಲಿ,
ಮತ್ತವರನಿಟ್ಟಾನಂದ ಬಡಿಸುವನು ॥ ೧೬ ॥

ಜನಪ ಮೆಚ್ಚಿದರೀವ ಧನ ವಾಹನ ವಿಭೂಷಣ ವಸನ ಭೂಮಿ,
ತನುಮನಗಳಿತ್ತಾದರಿಪರುಂಟೇನೋ ಲೋಕದೊಳು,
ಅನವರತ ನೆನೆವವರ ಅನಂತಾಸನವೆ ಮೊದಲಾದಾಲಯದೊಳಿಟ್ಟು,
ಅಣುಗನಂದದಲವರ ವಶನಾಗುವ ಮಹಾಮಹಿಮ ॥ ೧೭ ॥

ಭುವನ ಪಾವನ ಚರಿತ, ಪುಣ್ಯ ಶ್ರವಣ ಕೀರ್ತನ,
ಪಾಪ ನಾಶನ, ಕವಿಭಿರೀಡಿತ, ಕೈರವದಳಶ್ಯಾಮ, ನಿಸ್ಸೀಮ,
ಯುವತಿವೇಷದಿ ಹಿಂದೆ ಗೌರೀ ಧವನ ಮೋಹಿಸಿ ಕೆಡಿಸಿ ಉಳಿಸಿದ,
ಇವನ ಮಾಯವ ಗೆಲುವ ನಾವನು ಈ ಜಗತ್ರಯದಿ ॥ ೧೮ ॥

ಪಾಪಕರ್ಮವ ಸಹಿಸುವಡೆ ಲಕ್ಷ್ಮೀಪತಿಗೆ ಸಮರಾದ
ದಿವಿಜರನೀ ಪಯೋಜಭವಾಂಡದೊಳಗಾವಲ್ಲಿ ನಾ ಕಾಣೆ,
ಗೋಪ-ಗುರುವಿನ ಮಡದಿ-ಭೃಗು-ನಗಚಾಪ ಮೊದಲಾದವರು ಮಾಡ್ದ
ಮಹಾಪರಾಧಗಳೆಣಿಸಿದನೆ, ಕರುಣಾ ಸಮುದ್ರ ಹರಿ ॥ ೧೯ ॥

ಅಂಗುಟಾಗ್ರದಿ ಜನಿಸಿದಮರತರಂಗಿಣಿಯು ಲೋಕತ್ರಯಗಳಘಹಿಂಗಿಸುವಳು,
ಅವ್ಯಾಕೃತಾಕಾಶಾಂತ ವ್ಯಾಪಿಸಿದ ಇಂಗಡಲ ಮಗಳೊಡಯನ
ಅಂಗೋಪಾಂಗಗಳಲಿಪ್ಪ, ಅಮಲನಂತ ಸುಮಂಗಳಪ್ರದನಾಮ
ಪಾವನಮಾಳ್ಪದೇನರಿದು ॥ ೨೦ ॥

ಕಾಮಧೇನು–ಸುಕಲ್ಪತರು–ಚಿಂತಾಮಣಿಗಳು ಅಮರೇಂದ್ರ ಲೋಕದಿ
ಕಾಮಿತಾರ್ಥಗಳೀವ ವಲ್ಲದೆ ಸೇವೆ ಮಾಳ್ಪರಿಗೆ,
ಶ್ರೀಮುಕುಂದನ ಪರಮ ಮಂಗಳ ನಾಮ ನರಕಸ್ಥರನು ಸಲಹಿತು,।
ಪಾಮರರ ಪಂಡಿತರೆನಿಸಿ ಪುರುಷಾರ್ಥ ಕೊಡುತಿಹುದು ॥ ೨೧ ॥

ಮನದೊಳಗೆ ಸುಂದರ ಪದಾರ್ಥವ ನೆನೆದು ಕೊಡೆ ಕೈಕೊಂಡು,
ಬಲು ನೂತನ ಸುಶೋಭಿತ ಗಂಧ ಸುರಸೋಪೇತ ಫಲರಾಶಿ
ದ್ಯುನದಿ ನಿವಹಗಳಂತೆ ಕೊಟ್ಟವರನು ಸದಾ ಸಂತೈಸುವನು,
ಸದ್ಗುಣವ ಕದ್ದವರ ಅಘವ ಕದಿವನು ಅನಘನೆಂದೆನಿಸಿ ॥ ೨೨ ॥

ಚೇತನಾ ಚೇತನ ವಿಲಕ್ಷಣ,  ನೂತನ ಪದಾರ್ಥಗಳೊಳಗೆ ಬಲು ನೂತನ,
ಅತಿಸುಂದರಕೆ ಸುಂದರ, ರಸಕೆ ರಸರೂಪ,
ಜಾತರೂಪೋದರ ಭವಾದ್ಯರೊಳಾತತ ಪ್ರತಿಮ ಪ್ರಭಾವ,
ಧರಾತಳದೊಳೆಮ್ಮೊಡನೆ ಆಡುತಲಿಪ್ಪ ನಮ್ಮಪ್ಪ ॥ ೨೩ ॥

ತಂದೆ ತಾಯ್ಗಳು ತಮ್ಮ ಶಿಶುವಿಗೆ ಬಂದ ಭಯಗಳ ಪರಿಹರಿಸಿ,
ನಿಜ ಮಂದಿರದಿ ಬೇಡಿದುದನಿತ್ತಾದರಿಸುವಂದದಲಿ,
ಹಿಂದೆ ಮುಂದೆಡಬಲದಿ ಒಳ ಹೊರಗಿಂದಿರೇಶನು ತನ್ನವರನೆಂದೆಂದು ಸಲಹುವನು
ಆಗಸದವೋಲೆತ್ತ ನೋಡಿದರು ॥ ೨೪ ॥

ಒಡಲ ನೆಳಲಂದದಲಿ ಹರಿ ನಮ್ಮೊಡನೆ ತಿರುಗುವನು,
ಒಂದರಕ್ಷಣ ಬಿಡದೆ ಬೆಂಬಲವಾಗಿ ಭಕ್ತಾಧೀನನೆಂದೆನಿಸಿ,
ತಡೆವ ದುರಿತೌಘಗಳ, ಕಾಮದ ಕೊಡುವ ಸಕಲೇಷ್ಟಗಳ,
ಸಂತತ ನಡೆವ ನಮ್ಮಂದದಲಿ, ನವಿಸುವಿಶೇಷ ಸನ್ಮಹಿಮ ॥ ೨೫ ॥

ಬಿಟ್ಟವರ ಭವಪಾಶದಿಂದಲಿ ಕಟ್ಟುವನು ಬಹುಕಠಿಣನಿವ,
ಶಿಷ್ಟೇಷ್ಟನೆಂದರಿದನವರತ ಸದ್ಭಕ್ತಿ ಪಾಶದಲಿ ಕಟ್ಟುವರ
ಭವಕಟ್ಟು ಬಿಡಿಸುವ ಸಿಟ್ಟಿನವನಿವನಲ್ಲ,
ಕಾಮದ ಕೊಟ್ಟುಕಾವನು ಸಕಲ ಸೌಖ್ಯವನಿಹಪರಂಗಳಲಿ ॥ ೨೬ ॥

ಕಣ್ಣಿಗೆವೆಯುಂದದಲಿ, ಕೈ ಮೈ ತಿಣ್ಣಿಗೊದಗುವ ತೆರದಿ,
ಪಲ್ಗಳು ಪಣ್ಣು ಫಲಗಳನಗಿದು ಜಿಹ್ವೆಗೆ ರಸವನೀವಂತೆ,
ಪುಣ್ಯ ಫಲವೀವಂದದಲಿ ನುಡಿವೆಣ್ಣೆ ನಾಣ್ಮಾಂಡದೊಳು,
ಲಕ್ಷ್ಮಣ ನಣ್ಣ ನೊದಗುವ ಭಕ್ತರವಸರಕಮರಗಣ ಸಹಿತ ॥ ೨೭ ॥

ಕೊಟ್ಟದನು ಕೈಕೊಂಬ, ಅರಕ್ಷಣ ಬಿಟ್ಟಗಲ ತನ್ನವರ,
(ತನ್ನವರ) ದುರಿತಗಳಟ್ಟುವನು ದೂರದಲಿ ದುರಿತಾರಣ್ಯ ಪಾವಕನು,
ಬೆಟ್ಟ ಬೆನ್ನಿಲಿ ಹೊರಿಸಿದವರೊಳು ಸಿಟ್ಟು ಮಾಡಿದನೇನೋ ಹರಿ,
ಕಂಗೆಟ್ಟ ಸುರರಿಗೆ ಸುಧೆಯನುಣಿಸಿದ ಮುರಿದನಹಿತರನಾ ॥ ೨೮ ॥

ಖೇದ ಮೋದ ಜಯಾಪಜಯ ಮೊದಲಾದ ದೋಷಗಳಿಲ್ಲ,
ಚಿನ್ಮಯಸಾದರದಿ ತನ್ನಂಘ್ರಿಕಮಲವ ನಂಬಿ ಸ್ತುತಿಸುವರ ಕಾದುಕೊಂಡಿಹ,
ಪರಮಕರುಣ ಮಹೋದಧಿಯು, ತನ್ನವರು ಮಾಡ್ದಮಹಾಪರಾಧಗಳ ನೋಡದಲೆ ಸಲಹುವ,
ಸರ್ವಕಾಮದನು ॥ ೨೯ ॥

ಮೀನ ಕೂರ್ಮ ವರಾಹ ನರಪಂಚಾನನಾತುಳ ಶೌರ್ಯ, ವಾಮನ,
ರೇಣುಕಾತ್ಮಜ, ರಾವಣಾದಿನಿಶಾಚರಧ್ವಂಸಿ,
ಧೇನುಕಾಸುರಮಥನ, ತ್ರಿಪುರವ ಹಾನಿಗೈಸಿದ ನಿಪುಣ,
ಕಲಿಮುಖ ದಾನವರ ಸಂಹರಿಸಿ ಧರ್ಮದಿ ಕಾಯ್ದ ಸುಜನರನಾ ॥ ೩೦ ॥

ಶ್ರೀ ಮನೋರಮ, ಶಮಲ ವರ್ಜಿತ, ಕಾಮಿತಪ್ರದ,
ಕೈರವದಳಶ್ಯಾಮ, ಶಬಲ, ಶರಣ್ಯ, ಶಾಶ್ವತ, ಶರ್ಕರಾಕ್ಷ ಸಖ,
ಸಾಮಸನ್ನುತ, ಸಕಲ ಗುಣಗಣ ಧಾಮ, ಶ್ರೀ ಜಗನ್ನಾಥ ವಿಠಲನು,
ಈ ಮಹಿಯೊಳವತರಿಸಿ ಸಲಹಿದ ಸಕಲ ಸುಜನರನಾ ॥ ೩೧ ॥

॥ ಇತಿ ಶ್ರೀ ಕರುಣಾ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

## ॥ ३. ಶ್ರೀ ವ್ಯಾಪ್ತಿ ಸಂಧಿ ॥

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ,
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥

ಪುರುಷರೂಪತ್ರಯ–ಪುರಾತನ ಪುರುಷ–ಪುರುಷೋತ್ತಮ–ಕ್ಷರಾಕ್ಷರ ಪುರುಷಪೂಜಿತ ಪಾದ,
ಪೂರ್ಣಾನಂದ ಜ್ಞಾನಮಯ,
ಪುರುಷಸೂಕ್ತ ಸುಮೇಯ, ತತ್ತತ್ಪುರುಷ, ಹೃತ್ಪುಷ್ಕರನಿಲಯ, ಮಹ ಪುರುಷ,
ಅಜಾಂಡಾಂತರದಿ ಬಹಿರದಿ ವ್ಯಾಪ್ತ ನಿರ್ಲಿಪ್ತ ॥ ೧ ॥

ಸ್ತ್ರೀ-ನಪುಂಸಕ-ಪುರುಷ-ಭೂ-ಸಲಿಲಾನಲಾನಿಲ-ಗಗನ-ಮನ (ಸಲಿಲ-ಅನಲ-ಅನಿಲ)
ಶಶಿ-ಭಾನು-ಕಾಲ-ಗುಣ-ಪ್ರಕೃತಿಯೊಳಗೊಂದು ತಾನಲ್ಲ,
ಏನು ಇವನ ಮಹಾಮಹಿಮೆ ಕಡೆ ಗಾಣರಜಭವ ಶಕ್ರಮುಖರು,
ನಿದಾನಿಸಲು ಮಾನವರಿಗಳವಡುವದೇ ವಿಚಾರಿಸಲು ॥ ೨ ॥

ಗಂಧ-ರಸ-ರೂಪ-ಸ್ಪರಶ-ಶಬ್ದೊಂದು ತಾನಲ್ಲ, ಅದರದರ ಪೆಸರಿಂದ ಕರೆಸುತ
ಜೀವರಿಗೆ ತರ್ಪಕನು ತಾನಾಗಿ,
ಪೊಂದಿಕೊಂಡಿಹ ಪರಮ ಕರುಣಾಸಿಂಧು,
ಶಾಶ್ವತ ಮನವೆ ಮೊದಲಾದಿಂದ್ರಿಯಗಳೊಳಗಿದ್ದು ಭೋಗಿಸುತಿಹನು ವಿಷಯಗಳ ॥ ೩ ॥

ಶ್ರವಣ-ನಯನ-ಘ್ರಾಣ-ತ್ವಗ್ರಸನಿವುಗಳೊಳು (ತ್ವಕ್-ರಸನ-ಇವುಗಳೊಳು),
ವಾಕ್-ಪಾಣಿ-ಪಾದಾದ್ಯವಯವಗಳೊಳು, ತದ್ಗುಣಗಳೊಳು, ತತ್ಪತಿಗಳೊಳಗೆ,
ಪ್ರವಿತತನು ತಾನಾಗಿ ಕೃತಿಪತಿ ವಿವಿಧ ಕರ್ಮವ ಮಾಡಿ ಮಾಡಿಸಿ,
ಭವಕೆ ಕಾರಣನಾಗಿ ತಿರುಗಿಸುತಿಹನು ತಿಳಿಸದಲೆ ॥ ೪ ॥

ಗುಣಿಗುಣಗಳೊಳಗಿದ್ದು ಗುಣಿಗುಣನೆನಿಸುವನು,
ಗುಣಬದ್ಧನಾಗದೆ ಗುಣಜ ಪುಣ್ಯಾಪುಣ್ಯಫಲ ಬ್ರಹ್ಮಾದಿಚೇತನಕೆ ಉಣಿಸುತವರೊಳಗಿದ್ದು,
ವೃಜಿನಾರ್ದನ ಚಿದಾನಂದೈಕ ದೇಹನು,
ಕೊನೆಗೆ ಸಚರಾಚರ ಜಗದ್ಭುಕುವೆನಿಪನವ್ಯಯನು ॥ ೫ ॥

ವಿದ್ಯೆತಾನೆನಿಸಿಕೊಂಬನಿರುದ್ಧದೇವನು,
ಸರ್ವಜೀವರ ಬುದ್ಧಿಯಲಿ ತಾನಿದ್ದು ಕೃತಿಪತಿ ಬುದ್ಧಿಯೆನಿಸುವನು,
ಸಿದ್ಧಿಯೆನಿಸುವ ಸಂಕರುಷಣ, ಪ್ರಸಿದ್ಧನಾಮಕ ವಾಸುದೇವ,
ಅನವದ್ಯರೂಪ ಚತುಷ್ಟಯಗಳರಿತವನೆ ಪಂಡಿತನು ॥ ೬ ॥

ತನುಚತುಷ್ಟಯಗಳೊಳು ನಾರಾಯಣನು ಹೃತ್ಕಮಲಾಖ್ಯ ಸಿಂಹಾಸನದೊಳು-
ಅನಿರುದ್ಧಾದಿ ರೂಪಗಳಿಂದ ಶೋಭಿಸುತ,
ತನಗೆ ತಾನೇ ಸೇವ್ಯ ಸೇವಕ ನೆನಿಸಿ,
ಸೇವಾಸಕ್ತ ಸುರರೊಳಗನವರತ ನೆಲೆಸಿದ್ದು ಸೇವೆಯ ಕೊಂಬನವರಂತೆ ॥ ೭ ॥

ಜಾಗರ ಸ್ವಪ್ನಂಗಳೊಳು ವರಭೋಗಿಶಯನನು ಬಹು ಪ್ರಕಾರ ವಿಭಾಗಗೈಸಿ
ನಿರಂಶಜೀವರ ಚಿಚ್ಛರೀರವನು ಭೋಗವಿತ್ತು ಸುಷುಪ್ತಿಕಾಲದಿ,
ಸಾಗರವ ನದಿ ಕೂಡುವಂತೆ ವಿಯೋಗರಹಿತನು
ಅಂಶಗಳನೇಕತ್ರವೈದಿಸುವ ॥ ೮ ॥

ಭಾರ್ಯರಿಂದೊಡಗೂಡಿ ಕಾರಣ ಕಾರ್ಯವಸ್ತುಗಳಲ್ಲಿ
ಪ್ರೇರಕ ಪ್ರೇರ್ಯ ರೂಪಗಳಿಂದ ಪಟತಂತುಗಳವ್ಹೋಲಿದ್ದು,
ಸೂರ್ಯಕಿರಣಗಳಂತೆ ತನ್ನಯ ವೀರ್ಯದಿಂದಲಿ ಕೊಡುತ ಕೊಳುತಿಹ,
ಅನಾರ್ಯರಿಗೆ ಈತನ ವಿಹಾರವು ಗೋಚರಿಪುದೇನೋ ॥ ೯ ॥

ಜನಕ ತನ್ನಾತ್ಮಜಗೆ ವರ ಭೂಷಣ ದುಕೂಲವ ತೊಡಿಸಿ
ತಾ ವಂದನೆಯ ಕೈಕೊಳುತವನ ಹರಸುತ ಹರುಷಬಡುವಂತೆ,
ವನರುಹೇಕ್ಷಣ ಪೂಜ್ಯ ಪೂಜಕನೆನಿಸಿ,
ಪೂಜಾಸಾಧನ ಪದಾರ್ಥನು ತನಗೆ ತಾನಾಗಿ ಫಲಗಳನೀವ ಭಜಕರಿಗೆ ॥ ೧೦ ॥

ತಂದೆ ಬಹು ಸಂಭ್ರಮದಿ ತನ್ನಯ ಬಂಧು ಬಳಗವ ನೆರಹಿ,
ಮದುವೆಯ ನಂದನಗೆ ತಾ ಮಾಡಿ ಮನೆಯೊಳಗಿಡುವ ತೆರದಂತೆ,
ಇಂದಿರಾಧವ ತನ್ನ ಇಚ್ಛೆಯಲಿಂದ ಗುಣಗಳ ಚೇತನಕೆ ಸಂಬಂಧಗೈಸಿ,
ಸುಖಾಸುಖಾತ್ಮಕ ಸಂಸೃತಿಯೊಳಿಡುವ ॥ ೧೧ ॥

ತೃಣಕೃತಾಲಯದೊಳಗೆ ಪೊಗೆ ಸಂದಣಿಸಿ ಪ್ರತಿ ಛಿದ್ರದಲಿ ಪೊರಮಟ್ಟು
ಅನಳನಿರವನು ತೋರಿ ತೋರದಲಿಪ್ಪ ತೆರದಂತೆ,
ವನಜಜಾಂಡದೊಳಖಿಳ ಜೀವರ ತನುವಿನೊಳಹೊರಗಿದ್ದು ಕಾಣಿಸದೆ
ಅನಿಮಿಷೇಶನು ಸಕಲ ಕರ್ಮವ ಮಾಳ್ಪನವರಂತೆ ॥ ೧೨ ॥

ಪಾದಪಗಳಡಿಗೆರೆಯೆ ಸಲಿಲವು ತೋದು ಕೊಂಬಿಗಳುಬ್ಬಿ ಪುಷ್ಪ ಸ್ವಾದು ಫಲವೀವಂದದಲಿ,
ಸರ್ವೇಶ್ವರನು ಜನರಾರಾಧನೆಯ ಕೈಕೊಂಡು,
ಬ್ರಹ್ಮ ಭವಾದಿಗಳ ನಾಮದಲಿ ಫಲವಿತ್ತಾದರಿಸುವನು ,
ತನ್ನ ಮಹಿಮೆಯ ತೋರಗೊಡ ಜನಕೆ ॥ ೧೩ ॥

ಶ್ರುತಿತತಿಗಳಿಗೆ ಗೋಚರಿಸದ ಅಪ್ರತಿಮಜಾನಂದಾತ್ಮನಚ್ಯುತ, (ಅಪ್ರತಿಮ-ಅಜ-ಆನಂದ-ಆತ್ಮನು-ಅಚ್ಯುತ)
ವಿತತ ವಿಶ್ವಾಧಾರ ವಿದ್ಯಾಧೀಶ ವಿಧಿಜನಕ,
ಪ್ರತಿದಿವಸ ಚೇತನರೊಳಗೆ ಪ್ರಾಕೃತ ಪುರುಷನಂದದಲಿ ಸಂಚರಿಸುತ,
ನಿಯಮ್ಯ ನಿಯಾಮಕನು ತಾನಾಗಿ ಸಂತೈಪ ॥ ೧೪ ॥

ಮನ ವಿಷಯದೊಳಗಿರಿಸಿ ವಿಷಯವ ಮನದೊಳಗೆ ನೆಲೆಗೊಳಿಸಿ,
ಬಲು ನೂತನವು ಸುಸಮೀಚೀನವಿದು ಉಪಾದೇಯವೆಂದರುಪಿ,
ಕನಸಿಲಾದರು ತನ್ನ ಪಾದದ ನೆನೆವನೀಯದೆ,
ಸರ್ವರೊಳಗಿದ್ದನುಭವಿಸುವನು ಸ್ಥೂಲ ವಿಷಯವ ವಿಶ್ವನೆಂದೆನಿಸಿ ॥ ೧೫ ॥

ತೋದಕನು ತಾನಾಗಿ ಮನ ಮೊದಲಾದ ಕರಣದೊಳಿದ್ದು ವಿಷಯವ ನೈದುವನು
ನಿಜಪೂರ್ಣಸುಖಮಯ ಗ್ರಾಹ್ಯಗ್ರಾಹಕನು,
ವೇದವೇದ್ಯನು ತಿಳಿಯದವನೋಪಾದಿ ಭುಂಜಿಸುತೆಲ್ಲರೊಳಗೆ
ಆಹ್ಲಾದ ಬಡುವನು ಭಕ್ತವತ್ಸಲ ಭಾಗ್ಯಸಂಪನ್ನ ॥ ೧೬ ॥

ನಿತ್ಯ–ನಿಗಮಾತೀತ–ನಿರ್ಗುಣ–ಭೃತ್ಯವತ್ಸಲ–ಭಯವಿನಾಶನ–
ಸತ್ಯಕಾಮ–ಶರಣ್ಯ–ಶ್ಯಾಮಲ–ಕೋಮಲಾಂಗ–ಸುಖಿ,
ಮತ್ತನಂದದಿ ಮರ್ತ್ಯರೊಳಹೊರಗೆತ್ತ ನೋಡಲು ಸುತ್ತುತಿಪ್ಪನು,
ಅತ್ಯಧಿಕ ಸಂತೃಪ್ತ ತ್ರಿಜಗದ್ವ್ಯಾಪ್ತ ಪರಮಾಪ್ತ ॥ ೧೭ ॥

ಪವಿಹರಿನ್ಮಣಿ ವಿದ್ರುಮದ ಸಚ್ಛವಿಗಳಂದದಿ ರಾಜಿಸುತ,
ಮಾಧವ ನಿರಂತರ ದೇವ ಮಾನವ ದಾನವರೊಳಿದ್ದು,
ತ್ರಿವಿಧಗುಣ ಕರ್ಮ ಸ್ವಭಾವವ ಪವನಮುಖ ದೇವಾಂತರಾತ್ಮಕ,
ದಿವಸದಿವಸದಿ ವ್ಯಕ್ತಮಾಡುತಲವರೊಳಿದ್ದುಣಿಪ ॥ ೧೮ ॥

ಅಣುಮಹತ್ತಿನೊಳಿಪ್ಪ, ಘನಪರಮಣುವಿನೊಳಡಗಿಸುವ,
ಸೂಕ್ಷ್ಮವ ಮುಣುಗಿಸುವ, ತೇಲಿಸುವ ಸ್ಥೂಲಗಳ, ಅವನ ಮಾಯವಿದು,
ದನುಜರಾಕ್ಷಸರೆಲ್ಲರಿವನೊಳು ಮುನಿದು ಮಾಡುವದೇನು,
ಉಲೂಖಲ ಒನಕೆಗಳು ಧಾನ್ಯಗಳ ಹಣಿವಂದದಲಿ ಸಂಹರಿಪ ॥ ೧೯ ॥

ದೇವ ಮಾನವ ದಾನವರು ಎಂದೀ ವಿಧದಲಾವಾಗಲಿಪ್ಪರು,
ಮೂವರೊಳಗಿವಗಿಲ್ಲ ಸ್ನೇಹೋದಾಸೀನ ದ್ವೇಷ,
ಜೀವರಧಿಕಾರಾನುಸಾರದಲೀವ ಸುಖ ಸಂಸಾರದುಃಖವ,
ತಾ ಉಣದಲವರವರಿಗುಣಿಸುವ ನಿರ್ಗತಾಶನನು ॥ ೨೦ ॥

ಎಲ್ಲಿ ಕೇಳಿದರೆ ಅಲ್ಲಿ, (ಎಲ್ಲಿ) ನೋಡಿದರೆ ಅಲ್ಲಿ, (ಎಲ್ಲಿ) ಬೇಡಿದರೆ ಅಲ್ಲಿ, (ಎಲ್ಲಿ) ನೀಡಿದರೆ ಅಲ್ಲಿ,
(ಎಲ್ಲಿ) ಓಡಿದರೆ ಅಲ್ಲಿ, (ಎಲ್ಲಿ) ಆಡಿದರೆ ಅಲ್ಲಿ ಇರುತಿಹನು,
ಬಲ್ಲಿದರಿಗತಿ ಬಲ್ಲಿದನು, ಸರಿಯಿಲ್ಲ ಇವಗಾವಲ್ಲಿ ನೋಡಲು,
ಖುಲ್ಲಮಾನವರೊಲ್ಲನಪ್ರತಿಮಲ್ಲ ಜಗಕೆಲ್ಲ ॥ ೨೧ ॥

[ಎಲ್ಲಿ ಕೇಳಿದರೆ (ಅಲ್ಲೆ ಇರುತಿಹನು), ಎಲ್ಲಿ ನೋಡಿದರೆ (ಅಲ್ಲೆ ಇರುತಿಹನು),
ಎಲ್ಲಿ ಬೇಡಿದರೆ (ಅಲ್ಲೆ ಇರುತಿಹನು), ಎಲ್ಲಿ ನೀಡಿದರೆ (ಅಲ್ಲೆ ಇರುತಿಹನು),
ಎಲ್ಲಿ ಓಡಿದರೆ (ಅಲ್ಲೆ ಇರುತಿಹನು), ಎಲ್ಲಿ ಆಡಿದರೆ, ಅಲ್ಲೆ ಇರುತಿಹನು,]
ಬಲ್ಲಿದರಿಗತಿ ಬಲ್ಲಿದನು, ಸರಿಯಿಲ್ಲ ಇವಗಾವಲ್ಲಿ ನೋಡಲು,
ಖುಲ್ಲಮಾನವರೊಲ್ಲನಪ್ರತಿಮಲ್ಲ ಜಗಕೆಲ್ಲ ॥ ೨೧ ॥

ತಪ್ತಲೋಹವು ನೋಳ್ಪ ಜನರಿಗೆ ಸಪ್ತ ಜಿಹ್ವನ ತೆರದಿ ತೋರ್ಪದು,
ಲುಪ್ತ ಪಾವಕ ಲೋಹ ಕಾಂಬುದು ಪೂರ್ವದೋಪಾದಿ,
ಸಪ್ತವಾಹನ ನಿಖಿಳ ಜನರೊಳು ವ್ಯಾಪ್ತನಾದುದರಿಂದ,
ಸರ್ವರು ಆಪ್ತರಾಗಿಹರೆಲ್ಲ ಕಾಲದಿ ಹಿತವ ಕೈಕೊಂಡು ॥ ೨೨ ॥

ವಾರಿದನು ಮಳೆಗರೆಯೆ ಬೆಳೆದಿಹ ಭೂರುಹಂಗಳು ಚಿತ್ರ ಫಲರಸ ಬೇರೆ ಬೇರಿಪ್ಪಂತೆ,
ಬಹುವಿಧ ಜೀವರೊಳಗಿದ್ದು ಮಾರಮಣನವರವರ ಯೋಗ್ಯತೆ-
ಮೀರದಲೆ ಗುಣಕರ್ಮಗಳ ಅನುಸಾರ ನಡೆಸುವ,
ದೇವನಿಗೆ ವೈಷಮ್ಯವೆಲ್ಲಿಹುದೋ ॥ ೨೩ ॥

ವಾರಿಜಾಪ್ತನ ಕಿರಣ ಮಣಿಗಳ ಸೇರಿ,
ತತ್ತದ್ವರ್ಣಗಳನು ವಿಕಾರಗೈಸದೆ ನೋಳ್ಪರಿಗೆ ಕಂಗೊಳಿಸುವಂದದಲಿ,
ಮಾರಮಣ ಲೋಕತ್ರಯದೊಳಿಹ ಮೂರುವಿಧ ಜೀವರೊಳಗಿದ್ದು,
ವಿಹಾರಮಾಡುವನವರ ಯೋಗ್ಯತೆ ಕರ್ಮವನುಸರಿಸಿ ॥ ೨೪ ॥

ಜಲವನಪಹರಿಸುವ ಘಳಿಗೆ ಬಟ್ಟಲನುಳಿದು,
ಜಯಘಂಟೆ ಕೈಪಿಡಿದೆಳೆದು ಹೊಡೆವಂದದಲಿ,
ಸಂತತ ಕರ್ತೃತಾನಾಗಿ ಹಲಧರಾನುಜ ಪುಣ್ಯಪಾಪದ ಫಲಗಳನು,
ದೇವಾಸುರರ ಗಣದೊಳು ವಿಭಾಗವ ಮಾಡಿ ಉಣಿಸುತ ಸಾಕ್ಷಿಯಾಗಿಪ್ಪ ॥ ೨೫ ॥

ಪೊಂದಿಕೊಂಡಿಹ ಸರ್ವರೊಳು ಸಂಬಂಧವಾಗದೆ,
ಸಕಲಕರ್ಮವರಂದದಲಿ ತಾ ಮಾಡಿಮಾಡಿಪ ತತ್ಫಲಗಳುಣದೆ,
ಕುಂದದಣು ಮಾಹತ್ತೆನಿಪ, ಘಟಮಂದಿರದಿ ಸರ್ವತ್ರ ತುಂಬಿಹ,
ಬಾಂದಳದ ತೆರದಂತೆ ಇರುತಿಪ್ಪನು ರಮಾರಮಣ ॥ ೨೬ ॥

ಕಾದ ಕಬ್ಬಿಣ ಹಿಡಿದು ಬಡಿಯಲು ವೇದನೆಯು ಲೋಹಗಳಿಗಲ್ಲದೆ-
ಆದುದೇನೈ ಅನಳಗಾ ವ್ಯಥೆ ಏನು ಮಾಡಿದರು,
ಆದಿದೇವನು ಸರ್ವ ಜೀವರ ಕಾದುಕೊಂಡಿಹನೊಳಹೊರಗೆ,
ದು:ಖಾದಿಗಳು ಸಂಬಂಧವಾಗುವವೇನೋ ಚಿನ್ಮಯಗೆ ॥ ೨೭ ॥

ಮಳಲ ಮನೆಗಳ ಮಾಡಿ ಮಕ್ಕಳು ಕೆಲವು ಕಾಲದಲಾಡಿ,
ಮೋದದಿ ತುಳಿದು ಕೆಡಿಸುವ ತೆರದಿ,
ಲಕ್ಷ್ಮೀರಮಣ ಲೋಕಗಳ ಹಲವು ಬಗೆಯಲಿ ನಿರ್ಮಿಸುವ,
ನಿಶ್ಚಲನು ತಾನಾಗಿದ್ದು ಸಲಹುವ,
ಎಲರುಣಿಯವೋಲ್ ನುಂಗುವಗೆ ಎಲ್ಲಿಹುದೋ ಸುಖದು:ಖ ॥ ೨೮ ॥

ವೇಷಭಾಷೆಗಳಿಂದ ಜನರ ಪ್ರಮೋಷಗೈಸುವ ನಟಪುರುಷನೋಲ್,
ದೋಷದೂರನು ಲೋಕದೊಳು ಬಹುರೂಪ ಮಾತಿನಲಿ ತೋಷಿಸುವನು,
ಅವರವರ ಮನದಭಿಲಾಷೆಗಳ ಪೂರೈಸುತನುದಿನ ಪೋಷಿಸುವ,
ಪೂತಾತ್ಮ ಪೂರ್ಣಾನಂದ ಜ್ಞಾನಮಯ ॥ ೨೯ ॥

ಅಧಮ ಮಾನವನೋರ್ವ ಮಂತ್ರೌಷಧಗಳನು ತಾನರಿತು,
ಪಾವಕ ಉದಕಗಳ ಸಂಬಂಧವಿಲ್ಲದಲಿಪ್ಪನದರೊಳಗೆ,
ಪದುಮಜಾಂಡೋದರನು ಸರ್ವರ ಹೃದಯದೊಳಗಿರೆ,
ಕಾಲಗುಣಕರ್ಮದ ಕಲುಷ ಸಂಬಂಧವಾಗುವದೇ ನಿರಂಜನಗೆ ॥ ೩೦ ॥

ಒಂದು ಗುಣದೊಳನಂತ ಗುಣಗಳು, ಒಂದು ರೂಪದೊಳಿಹವು
ಲೋಕಗಳೊಂದೆ ರೂಪದಿ ಧರಿಸಿ ತದ್ಗತ ಪದಾರ್ಥದೊಳಹೊರಗೆ,
ಬಾಂದಳದವ್ಹೋಲಿದ್ದು ಬಹು ಪೆಸರಿಂದ ಕರೆಸುತ,
ಪೂರ್ಣಜ್ಞಾನಾನಂದಮಯ ಪರಿಪರಿ ವಿಹಾರವ ಮಾಡಿ ಮಾಡಿಸುವ ॥ ೩೧ ॥

ಎಲ್ಲರೊಳು ತಾನಿಪ್ಪ, ತನ್ನೊಳಗೆಲ್ಲರನು ಧರಿಸಿಹನು,
ಅಪ್ರತಿಮಲ್ಲ, ಮನ್ಮಥಜನಕ, ಜಗದಾದ್ಯಂತಮಧ್ಯಗಳ ಬಲ್ಲ,
ಬಹುಗುಣ ಭರಿತ, ದಾನವ ದಲ್ಲಣ, ಜಗನ್ನಾಥ ವಿಠ್ಠಲ,
ಸೊಲ್ಲುಲಾಲಿಸಿ ಸ್ತಂಭದಿಂದಲಿ ಬಂದ ಭಕುತನಿಗೆ ॥ ೩೨ ॥

॥ ಇತಿ ಶ್ರೀ ವ್ಯಾಪ್ತಿ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

## ॥ ೪. ಶ್ರೀ ಭೋಜನ ಸಂಧಿ ॥

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ,
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥

ವನಜಜಾಂಡದೊಳುಳ್ಳಖಿಳ ಚೇತನರು ಭುಂಜಿಪ ಚತುರವಿಧ ಭೋಜನಪದಾರ್ಥದಿ
ಚತುರವಿಧ ರಸರೂಪ ತಾನಾಗಿ, ಮನಕೆ ಬಂದಂತುಂಡುಣಿಸಿ,
ಸಂಹನನಕುಪಚಯ, ಕರಣಕಾನಂದ,
ಅನಿಮಿಷರಿಗಾತ್ಮ ಪ್ರದರ್ಶನ ಸುಖವನೀವ ಹರಿ ॥ ೧ ॥

ನೀಡದಂದದಲಿಪ್ಪ ಲಿಂಗಕೆಷೋಡಶಾತ್ಮಕ ರಸ ವಿಭಾಗವ ಮಾಡಿ,
ಷೋಡಶ ಕಲೆಗಳಿಗೆ ಉಪಚಯುಗಳನೆ ಕೊಡುತ,
ಕ್ರೋಡ ಎಪ್ಪತ್ತೆರಡು ಸಾವಿರ ನಾಡಿಗತ–
ದೇವತೆಗಳೊಳಗಿದ್ದಾಡುತಾನಂದಾತ್ಮ ಚರಿಸುವ ಲೋಕದೊಳು ತಾನು ॥ ೨ ॥

ವಾರಿವಾಚ್ಯನು ವಾರಿಯೊಳಗಿದ್ದಾರು ರಸವೆಂದೆನಿಸಿ,
ಮೂವತ್ತಾರು ಸಾವಿರ ಸ್ತ್ರೀಪುರುಷನಾಡಿಯಲಿ ತದ್ರೂಪಧಾರಕನು ತಾನಾಗಿ,
ಸರ್ವಶರೀರಗಳಲಿ ಅಹಶ್ಚರಾತ್ರಿ ವಿಹಾರ ಮಾಳ್ಪನು,
ಬೃಹತಿಯೆಂಬ ಸುನಾಮದಿಂ ಕರೆಸಿ ॥ ೩ ॥

ಆರು ರಸ ಸತ್ವಾದಿ ಭೇದದಿ ಆರು ಮೂರಾಗಿಹವು,
ಸಾರಾಸಾರ ನೀತಾಪ್ರಚುರ ಖಂಡಾಖಂಡ ಚಿತ್ರಚುರ,
ಈರಧಿಕ ಎಪ್ಪತ್ತುಸಾವಿರ ಮಾರಮಣನ ರಸಾಖ್ಯರೂಪ–
ಶರೀರದೊಳು ಭೋಜ್ಯ ಸುಪದಾರ್ಥದಿ ತಿಳಿದು ಭುಂಜಿಪುದು ॥ ೪ ॥

ಕ್ಷೀರಗತ ರಸರೂಪಗಳು ಮುನ್ನೂರು ಮೇಲೈವತ್ತು ನಾಲಕು,
ಚಾರು ಘೃತಗತ ರೂಪಗಳು ಇಪ್ಪತ್ತರೊಂಭತ್ತು,
ಸಾರಗುಡದೊಳಗೈದು ಸಾವಿರ ನೂರವೊಂದು ಸುರೂಪ,
ದ್ವಿಸಹಸ್ರಾರೆರಡು ಶತ ಪಂಚವಿಂಶತಿ ರೂಪ ಫಲಗಳಲಿ ॥ ೫ ॥

ವಿಶದ ಸ್ಥಿರ ತೀಕ್ಷ್ಣವು ನಿರ್ಹರ ರಸಗಳೊಳು–
ಮೂರೈದು ಸಾವಿರ ತ್ರಿಶತನವ ರೂಪಗಳ ಚಿಂತಿಸಿ ಭುಂಜಿಪುದು ವಿಷಯ,
ಶ್ವಸನ ತತ್ತ್ವೇಶರೊಳಗಿದ್ದೀಪೆಸರಿನಿಂದಲಿ ಕರೆಸುವನು,
ಧೇನಿಸಿದರೀ ಪರಿ ಮನಕೆ ಪೊಳೆವನು ಬಲ್ಲ ವಿಬುಧರಿಗೆ ॥ ೬ ॥

ಕಪಿಲ ನರಹರಿ ಭಾರ್ಗವತ್ರಯು ವಪುಷ ನೇತ್ರದಿ ನಾಸಿಕಾಸ್ಯದಿ,
ಶಫರನಾಮಕ ಜಿಹ್ವೆಯಲಿ, ದಂತದಲಿ ಹಂಸಾಖ್ಯ,
ತ್ರಿಪದಿಪಾದ್ಯಹಯಾಸ್ಯ ವಾಚ್ಯದೊಳಪರಿಮಿತ ಸುಖಪೂರ್ಣ,
ಸಂತತ ಕೃಪಣರೊಳಗಿದ್ದವರವರ ರಸ ಸ್ವೀಕರಿಸಿ ಕೊಡುವ ॥ ೭ ॥

ನಿರುಪಮಾನಂದಾತ್ಮ ಹರಿ ಸಂಕರುಷಣ ಪ್ರದ್ಯುಮ್ನ ರೂಪದಿ–
ಇರುತಿಹನು ಭೋಕ್ತೃಗಳೊಳಗೆ ತಚ್ಛಕ್ತಿದನು ಯೆನಿಸಿ,
ಕರೆಸುವನು ನಾರಾಯಣನಿರುದ್ಧೆರಡುನಾಮದಿ ಭೋಜ್ಯವಸ್ತುಗ–
ನಿರುತ ತರ್ಪಕನಾಗಿ ತೃಪ್ತಿಯನೀವ ಚೇತನಕೆ ॥ ೮ ॥

ವಾಸುದೇವನು ಒಳಹೊರಗೆ ಅವಕಾಶ ಕೊಡುವ ನಭಸ್ಥನಾಗಿ-
ರಮಾಸಮೇತ ವಿಹಾರ ಮಾಳ್ಪನು ಪಂಚರೂಪದಲಿ,
ಆ ಸರೋರುಹ ಸಂಭವಾಭವ ವಾಸವಾದ್ಯಮರಾದಿ ಚೇತನ ರಾಶಿಯೊಳಗೆ-
ಇಹನೆಂದು ಅರಿತವನವನೆ ಕೋವಿದನು ॥ ೯ ॥

ವಾಸುದೇವನು ಅನ್ನದೊಳು, ನಾನಾ ಸುಭಕ್ಷ್ಯದಿ ಸಂಕರುಷಣ,
ಕೃತೀಶ ಪರಮಾನ್ನದೊಳು, ಘೃತದೊಳಗಿಪ್ಪನನಿರುದ್ಧ,
ಆ ಸುಪರ್ಣಾಂಸಗನು ಸೂಪದಿ, ವಾಸವಾನುಜ ಶಾಕದೊಳು,
ಮೂಲೇಶ ನಾರಾಯಣನು ಸರ್ವತ್ರದಲಿ ನೆಲೆಸಿಹನು ॥ ೧೦ ॥

ಅಗಣಿತಾತ್ಮ ಸುಭೋಜನ ಪದಾರ್ಥಗಳ ಒಳಗೆ,
ಅಖಂಡವಾದೊಂದಗಳಿನೊಳನಂತಾಂಶದಿಂದಲಿ ಖಂಡನೆಂದೆನಿಸಿ,
ಜಗದಿ ಜೀವರ ತೃಪ್ತಿಬಡಿಸುವ ಸ್ವಗತ ಭೇದ ವಿವರ್ಜಿತನ,
ಈರ್ಬಗೆಯ ರೂಪವನರಿತು ಭುಂಜಿಸಿ ಅರ್ಪಿಸವನಡಿಗೆ ॥ ೧೧ ॥

ಈ ಪರಿಯಲರಿತುಂಬ ನರ ನಿತ್ಯೋಪವಾಸಿ-ನಿರಾಮಯನು- ನಿಷ್ಪಾಪಿ-
ನಿತ್ಯ ಮಹಾಸುಯಜ್ಞಗಳಾಚರಿಸಿದವನು,
ಪೋಪದಿಪ್ಪುದು ಬಪ್ಪುದೆಲ್ಲ ರಮಾಪತಿಗಧಿಷ್ಠಾನವೆನ್ನು,
ಕೃಪಾಪಯೋನಿಧಿ ಮಾತಲಾಲಿಸುವನು ಜನನಿಯಂತೆ ॥ ೧೨ ॥

ಆರೆರಡು ಸಾವಿರದ ಮೇಲಿನ್ನೂರ ಐವತ್ತೊಂದು ರೂಪದಿ-
ಸಾರಭೋಕ್ತನಿರುದ್ಧ ದೇವನು ಅನ್ನಮಯನೆನಿಪ,
ಮೂರೆರಡುವರೆಸಾವಿರದ ಮೇಲ್ ಮೂರಧಿಕ ನಾಲ್ವತ್ತು ರೂಪದಿ-
ತೋರುತಿಹ ಪ್ರದ್ಯುಮ್ನ ಜಗದೊಳು ಪ್ರಾಣಮಯನಾಗಿ ॥ ೧೩ ॥

ಎರಡು ಕೋಶಗಳೊಳಹೊರಗೆ ಸಂಕರುಷಣ ಐದು ಸುಲಕ್ಷದರವತ್ತೆರಡು-
ಸಾವಿರದೇಳಧಿಕ ಶತರೂಪಗಳ ಧರಿಸಿ ಕರೆಸಿಕೊಂಬ ಮನೋಮಯ ಎಂದು,
ಅರವಿದೂರನು ಈರೆರಡು ಸಾವಿರದ ಮುನ್ನೂರಾದ-
ಮೇಲ್ನಾಲ್ಕಧಿಕ ಎಪ್ಪತ್ತು ॥ ೧೪ ॥

ರೂಪದಿಂ, ವಿಜ್ಞಾನ ಮಯನೆಂಬೀ ಪೆಸರಿನಿಂ ವಾಸುದೇವನು-
ವ್ಯಾಪಿಸಿಹ ಮಹದಾದಿತತ್ತ್ವದಿ ತತ್ಪತಿಗಳೊಳಗೆ,
ಈ ಪುರುಷ ನಾಮಕನ ಶುಭಸ್ವೇದಾಪಳೆನಿಸಿದ ರಮಾಂಬ,
ತಾ ಬ್ರಹ್ಮಾಪರೋಕ್ಷಿಗಳಾದವರ ಲಿಂಗಾಂಗ ಕೆಡಿಸುವಳು ॥ ೧೫ ॥

ಐದುಸಾವಿರ ನೂರು ಇಪ್ಪತ್ತೈದು ನಾರಾಯಣ ರೂಪವ
ತಾ ಧರಿಸಿಕೊಂಡನುದಿನದಿ ಆನಂದಮಯನೆನಿಪ,
ಐದು ಲಕ್ಷದ ಮೇಲೆ ಎಂಭತ್ತೈದು ಸಾವಿರ ನಾಲ್ಕು ಶತಗಳ–
ಐದು ಕೋಶಾತ್ಮಕ ವಿರಿಂಚಾಂಡದೊಳು ತುಂಬಿಹನು ॥ ೧೬ ॥

ನೂರುವೊಂದು ಸುರೂಪದಿಂ ಶಾಂತೀರಮಣ ತಾನನ್ನನೆನಿಪ,
ಐನೂರ ಮೇಲ್ಮೂರಧಿಕ ದಶ ಪ್ರಾಣಾಖ್ಯ ಪ್ರದ್ಯುಮ್ನ,
ತೋರುತಿಹನೈವತ್ತು ಐದು ವಿಕಾರ ಮನದೊಳು ಸಂಕರುಷಣ,
ಐನೂರು ಚತುರಾಶೀತಿ ವಿಜ್ಞಾನಾತ್ಮ ವಿಶ್ವಾಖ್ಯ ॥ ೧೭ ॥

ಮೂರು ಸಾವಿರದರ್ಧಶತ ಮೇಲೀರಧಿಕ ರೂಪಗಳ ಧರಿಸಿ
ಶರೀರದೊಳಗಾನಂದಮಯ ನಾರಾಯಣಾಹ್ವಯನು,
ಈರೆರಡು ಸಾವಿರದ ಮೇಲ್ಮುನ್ನೂರ ಐದು ಸುರೂಪದಿಂದಲಿ,
ಭಾರತೀಶನೊಳಿಪ್ಪ ನವನೀತಸ್ಥ ಘೃತದಂತೆ ॥ ೧೮ ॥

ಮೂರಧಿಕ ಐವತ್ತು ಪ್ರಾಣ ಶರೀರದೊಳಗನಿರುದ್ಧನಿಪ್ಪ,
ಐನೂರು ಹನ್ನೊಂದಧಿಕಪಾನನೊಳಿಪ್ಪ ಪ್ರದ್ಯುಮ್ನ,
ಮೂರನೇ ವ್ಯಾನನೊಳಗೈದರೆ ನೂರು ರೂಪದಿ ಸಂಕರುಷಣ,
ಐನೂರ ಮೂವತ್ತೈದುದಾನನೊಳಿಪ್ಪ ಮಾಯೇಶ ॥ ೧೯ ॥

ಮೂಲ ನಾರಾಯಣನು ಐವತ್ತೇಳಧಿಕ ಐನೂರು ರೂಪವ ತಾಳಿ,
ಸರ್ವತ್ರದಿ ಸಮಾನನೊಳಿಪ್ಪ ಸರ್ವಜ್ಞ,
ಲೀಲೆಗೈವನು ಸಾವಿರದ ಮೇಲೇಳು ನೂರ್ಹನ್ನೊಂದು ರೂಪವ ತಾಳಿ,
ಪಂಚಪ್ರಾಣರೊಳು ಲೋಕಗಳ ಸಲಹುವನು ॥ ೨೦ ॥

ತ್ರಿನವತಿ ಸುರೂಪಾತ್ಮಕನಿರುದ್ಧನು ಸದಾ ಯಜಮಾನನಾಗಿದ್ದು
ಅನಲ–ಯಮಸೋಮಾದಿ ಪಿತೃದೇವತೆಗಳಿಗೆ–
ಅನ್ನನೆನಿಪನಾ ಪ್ರದ್ಯುಮ್ನ, ಸಂಕರುಷಣ ವಿಭಾಗವ ಮಾಡಿಕೊಟ್ಟುಂಡುಣಿಪ,
ನಿತ್ಯಾನಂದ ಭೋಜನದಾಯಿ ತುರ್ಯಾಹ್ವ ॥ ೨೧ ॥

ಷಣ್ಣವತಿ ನಾಮಕನು ವಸು ಮೂಗಣ್ಣ ಭಾಸ್ಕರರೊಳಗೆ ನಿಂತು,
ಪ್ರಾಪನ್ನರನುದಿನ ನಿಷ್ಕಪಟ ಸದ್ಭಕ್ತಿಯಲಿ ಮಾಳ್ಪ–
ಪುಣ್ಯ ಕರ್ಮವ ಸ್ವೀಕರಿಸಿ ಕಾರುಣ್ಯ ಸಾಗರನು,
ಆಪಿತೃಗಳಿಗಗಣ್ಯ ಸುಖವಿತ್ತವರ ಪೊರೆವನು ಎಲ್ಲ ಕಾಲದಲಿ ॥ ೨೨ ॥

ಸುತಪ ಏಕೋತ್ತರ ಸುಪಂಚಾಶತವರಣ ಕರಣದಿ–
ಚತುರವಿಂಶತಿಸುತತ್ತ್ವದಿ–ಧಾತುಗಳೊಳಿದ್ದವಿರತನಿರುದ್ಧ,
ಜತನ ಮಾಳ್ಪನು ಜಗದಿ ಜೀವರ ಪ್ರತತಿಗಳ,
ಷಣ್ಣವತಿ ನಾಮಕ ಚತುರ ಮೂರ್ತಿಗಳರ್ಚಿಸುವರದರಿಂದ ಬಲ್ಲವರು ॥ ೨೩ ॥

ಅಬುಜಜಾಂಡೋದರನು ವಿಪಿನದಿ ಶಬರಿ ಯೆಂಜಲನುಂಡ,
ಗೋಕುಲದಬಲೆಯರನೋಲಿಸಿದನು, ಋಷಿಪತ್ನಿಯರು ಕೊಟ್ಟನ್ನ ಸುಭುಜ ತಾ ಭುಂಜಿಸಿದ,
ಸ್ವರಮಣ ಕುಬುಜಗಂಧಕೆ ವೊಲಿದ,
ಮುನಿಗಣ ವಿಬುಧ ಸೇವಿತ ಬಿಡುವನೇ ನಾವಿತ್ತ ಕರ್ಮಫಲ ॥ ೨೪ ॥

ಗಣನೆಯಿಲ್ಲದ ಪರಮಸುಖ ಸದ್ಗುಣಗಣಂಗಳ,
ಲೇಶಲೇಶಕೆ ಎಣೆಯೆನಿಸದು ರಮಾಬ್ಜ ಭವಶಕ್ರಾದಿಗಳ ಸುಖವು,
ಉಣುತುಣುತ ಮೈಮರೆದು ಕೃಷ್ಣಾರ್ಪಣವೆನಲು,
ಕೈಕೊಂಬನರ್ಭಕ ಜನನಿ ಭೋಜನ ಸಮಯದಲಿ ಕೈವಡ್ಡುವಂದದಲಿ ॥ ೨೫ ॥

ಜೀವಕೃತ ಕರ್ಮಗಳ ಬಿಡದೆ ರಮಾವರನು ಸ್ವೀಕರಿಸಿ ಫಲಗಳನೀವನು–
ಅಧಿಕಾರಾನು ಸಾರದಲವರಿಗನವರತ,
ಪಾವಕನು ಸರ್ವಸ್ವ ಭುಂಜಿಸಿ ತಾ ವಿಕಾರವನೈದನೊಮ್ಮೆಗೆ,
ಪಾವನಕೆ ಪಾವನನೆನಿಪ ಹರಿಯುಂಬುದೇನರಿದು ॥ ೨೬ ॥

ಕಲುಷಜಿಹ್ವೆಗೆ ಸುಷ್ಮುಭೋಜನ ಜಲ ವೊದಲು ವಿಷತೋರುವುದು,
ನಿಷ್ಕಲುಷ ಜಿಹ್ವೆಗೆ ಸುರಸ ತೋರುವುದೆಲ್ಲ ಕಾಲದಲಿ,
ಸುಲಲಿತಾಂಗಗೆ ಸಕಲ ರಸ ಮಂಗಳವೆನಿಸುತಿಹುದು,
ಅನ್ನಮಯ ಕೈಕೊಳದೆ ಬಿಡುವನೆ ಪೂತನಿಯ ವಿಷವೊಲೆಯುನುಂಡವನು ॥ ೨೭ ॥

ಪೇಳಲೇನು ಸಮೀರದೇವನು ಕಾಳಕೂಟವನುಂಡು ಲೋಕವ ಪಾಲಿಸಿದ,
ತದ್ದಾಸನೋರ್ವನು ಅಮೃತನೆನಿಸಿದನು,
ಶ್ರೀ ಲಕುಮಿವಲ್ಲಭ ಶುಭಾಶುಭ ಜಾಲಕರ್ಮಗಳುಂಬನು,
ಉಪಚಯದೇಳಿಗೆಗಳಿವಗಿಲ್ಲ ವೆಂದಿಗು ಸ್ವರಸಗಳ ಬಿಟ್ಟು ॥ ೨೮ ॥

ಈ ಪರಿಯಲಚ್ಯುತನ ತತ್ತದ್ರೂಪ ತನ್ನಾಮಗಳ ಸಲೆ,
ನಾನಾ ಪದಾರ್ಥದಿ  ನೆನೆನೆನೆದು ಭುಂಜಿಸುತಲಿರು,
ವಿಷಯ ಪ್ರಾಪಕ ಸ್ಥಾಪಕ ನಿಯಾಮಕ ವ್ಯಾಪಕನು ಎಂದರಿದು,
ನೀ ನಿರ್ಲೇಪನಾಗಿರು ಪುಣ್ಯ ಪಾಪಗಳರ್ಪಿಸವನಡಿಗೆ ॥ ೨೯ ॥

ಐದು ಲಕ್ಷ್ಂಭತ್ತರೊಂಭತ್ತಾದ ಸಾವಿರದೇಳುನೂರರ ಐದು ರೂಪವ ಧರಿಸಿ,
ಭೋಕ್ತೃಗ ಭೋಜ್ಯನೆಂದೆನಿಸಿ,
ಶ್ರೀ ಧರಾದುರ್ಗಾರಮಣ ಪಾದಾದಿ ಶಿರ ಪರ್ಯಂತ ವ್ಯಾಪಿಸಿ ಕಾದು ಕೊಂಡಿಹ,
ಸಂತತ ಜಗನ್ನಾಥ ವಿಠಲನು ॥ ೩೦ ॥

॥ ಇತಿ ಶ್ರೀ ಭೋಜನ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀಃ ॥

## ॥ ೫. ಶ್ರೀ ವಿಭೂತಿ ಸಂಧಿ ॥

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ,
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥

ಶ್ರೀತರುಣಿ ವಲ್ಲಭನ ಪರಮ ವಿಭೂತಿರೂಪ ಕಂಡಕಂಡಲ್ಲೀ ತೆರದಿ–
ಚಿಂತಿಸುತ ನೋಡು ಸಂಭ್ರಮದಿ,
ನೀತಸಾಧಾರಣ ವಿಶೇಷ ಸಜಾತಿ ನೈಜಾಹಿತವು ವಿಜಾತಿ,
ಖಂಡಾಖಂಡ ಬಗೆಗಳನರಿತು ಬುಧರಿಂದ ॥ ೧ ॥

ಜಲಧರಾಗಸದೊಳಗೆ ಚರಿಸುವ ಹಲವು ಜೀವರ ನಿರ್ಮಿಸಿಹನು,
ಅದರೊಳು ಸಜಾತಿ ವಿಜಾತಿ ಸಾಧಾರಣ ವಿಶೇಷಗಳ ತಿಳಿದು.
ತತ್ತತ್ ಸ್ಥಾನದಲಿ ವೆಗ್ಗಳಿಸಿ ಹಬ್ಬಿದ ಮನದಿ ಪೂಜಿಸುತಲಿ,
ಅವನ ವ್ಯಾಪ್ತ ರೂಪಗಳ ನೋಡುತಲಿ ಹಿಗ್ಗುವದು ॥ ೨ ॥

ಪ್ರತಿಮೆ ಶಾಲಗ್ರಾಮ ಗೋಽಭ್ಯಾಗತನತಿಥಿ ಶ್ರೀತುಲಸಿ ಪಿಪ್ಪಲ–
ಯತಿ ವನಸ್ಥ ಗೃಹಸ್ಥ ವಟು ಯಜಮಾನ ಸ್ವಪರಜನ,
ಪೃಥಿವಿ ಜಲಶಿಖಿ ಪವನ ತಾರಾಪಥ ನವಗ್ರಹ ಯೋಗ ಕರಣ ಭ–
ತಿಥಿ ಸಿತಾಸಿತ ಪಕ್ಷ ಸಂಕ್ರಮಣ ಅವನಧಿಷ್ಠಾನ ॥ ೩ ॥

ಕಾದ ಕಾಂಚನದೊಳಗೆ ಶೋಭಿಪ ಆದಿತೇಯಾಸ್ಯನ ತೆರದಿ
ಲಕ್ಷ್ಮೀ ಧವನು ಪ್ರತಿದಿನದಿ ಶಾಲಗ್ರಾಮದೊಳಗಿಪ್ಪ–
ಐದುಸಾವಿರ ಮ್ಯೇಲೆ ಮೂವತ್ತೈದಧಿಕ ಐನೂರು ರೂಪದಿ,
ಭೂಧರಗಳಭಿಮಾನಿ ದಿವಿಜರೊಳಿಪ್ಪನನವರತ ॥ ೪ ॥

ಶ್ರೀರಮಣ ಪ್ರತಿಮೆಗಳೊಳಗೆ ಹದಿಮೂರಧಿಕವಾಗಿಪ್ಪ-
ಮೇಲ್ಯೆನೂರು ರೂಪವ ಧರಿಸಿ ಇಪ್ಪನು ಆಹಿತಾಚಲದಿ,
ದಾರುಮಥನವ ಗೈಯ್ಯೆ ಪಾವಕ ತೋರುವಂತೆ-
ಪ್ರತೀಕ ಸುರರೊಳು ತೋರುತಿಪ್ಪನು ತತ್ತದಾಕಾಲದಲಿ ನೋಳ್ಪರಿಗೆ ॥ ೫ ॥

ಕರಣನಿಯಾಮಕನು ತಾನುಪಕರಣದೊಳಗೈವತ್ತೆರಡು ಸಾವಿರದ-
ಹದಿನಾಲ್ಕಧಿಕ ಶತರೂಪಗಳನು ಧರಿಸಿ,
ಇರುತಿಹನು ತದ್ರೂಪನಾಮಗಳರಿತು ಪೂಜಿಸುತಿಹರ ಪೂಜೆಯ ನಿರುತ ಕೈಕೊಂಬ,
ತೃಷಾರ್ತನು ಜಲವ ಕೊಂಬಂತೆ ॥ ೬ ॥

ಬಿಂಬರೂಪನು ಈ ತೆರದಿ ಜಡಪೊಂಬಸಿರ ವೊದಲಾದ ಸುರರೊಳಗಿಂಬುಗೊಂಡಿಹನೆಂದರಿದು,
ಧರ್ಮಾರ್ಥಕಾಮಗಳ ಹಂಬಲಿಸದನುದಿನದಿ
ವಿಶ್ವಕುಟುಂಬಿ ಕೊಟ್ಟ ಕಣಾನ್ನ ಕುತ್ಸಿತ ಕಂಬಳಿಯೆ,
ಸೌಭಾಗ್ಯವೆಂದವನಂಘ್ರಿಗಳ ಭಜಿಸು ॥ ೭ ॥

ವಾರಿಯೊಳಗಿಪ್ಪತ್ತು ನಾಲಕು,
ಮೂರೆರಡು ಸಾವಿರದ ಮೇಲ್ ಮುನ್ನೂರು ಹದಿನೇಳೆನಿಪ ರೂಪವು ಶ್ರೀತುಲಸಿದಳದಿ,
ನೂರು ಅರವತ್ತೊಂದು ಪುಷ್ಪದಿ, ಮೂರಧಿಕದಶ ದೀಪದೊಳು,
ನಾನೂರುಮೂರು ಸುಮೂರ್ತಿಗಳು ಗಂಧದೊಳಗಿರುತಿಹವು ॥ ೮ ॥

ಅಷ್ಟದಳ ಸದ್ಹೃದಯ ಕಮಲಾಧಿಷ್ಠಿತನು ತಾನಾಗಿ,
ಸರ್ವೋತ್ಕೃಷ್ಟಮಹಿಮನು ದಳಗಳಲಿ ಸಂಚರಿಸುತೊಳಗಿದ್ದು,
ದುಷ್ಟರಿಗೆ ದುರ್ಬುದ್ಧಿ ಕರ್ಮ, ವಿಶಿಷ್ಟರಿಗೆ ಸುಜ್ಞಾನ ಧರ್ಮ,
ಸುಪುಷ್ಟಿಗೈಸುತ ಸಂತೈಪ ನಿರ್ದುಷ್ಟ ಸುಖಪೂರ್ಣ ॥ ೯ ॥

ವಿತ್ತದೇಹಾಗಾರ ದಾರಾಪತ್ಯ ಮಿತ್ರಾದಿಗಳೊಳಗೆ,
ಗುಣಚಿತ್ತ ಬುದ್ಧ್ಯಾದಿಂದ್ರಿಯಗಳೊಳು, ಜ್ಞಾನಕರ್ಮದೊಳು,
ತತ್ತದಾಹ್ವಯನಾಗಿ ಕರೆಸುತ ಸತ್ಯ ಸಂಕಲ್ಪಾನುಸಾರದಿ,
ನಿತ್ಯದಲಿ ತಾ ಮಾಡಿ ಮಾಡಿಪನೆಂದು ಸ್ಮರಿಸುತಿರು ॥ ೧೦ ॥

ಭಾವದ್ರವ್ಯ ಕ್ರಿಯೆಗಳೆನಿಸುವ ಈ ವಿಧಾದ್ವೈತತ್ರಯಂಗಳ (ವಿಧ-ಅದ್ವೈತತ್ರಯಂಗಳ),
ಭಾವಿಸುತ ಸದ್ಭಕ್ತಿಯಲಿ ಸರ್ವತ್ರ ಮರೆಯದಲೆ,
ತಾವಕನು ತಾನೆಂದು ಪ್ರತಿದಿನ ಸೇವಿಸುವ ಭಕ್ತರಿಗೆ,
ತನ್ನನು ಈವ ಕಾವ ಕೃಪಾಳು ಕರಿವರಗೊಲಿದ ತೆರದಂತೆ ॥ ೧೧ ॥

ಬಾಂದಳವೆ ಮೊದಲಾದುದರೊಳೊಂದೊಂದರಲಿ,
ಪೂಜಾ ಸುಸಾಧನ ವೆಂದೆನಿಸುವ ಪದಾರ್ಥಗಳು ಬಗೆಬಗೆಯ ನೂತನದಿ ಸಂದಣಿಸಿ ಕೊಂಡಿಹವು,
ಧ್ಯಾನಕೆ ತಂದಿನಿತು ಚಿಂತಿಸಿ ಸದಾ ಗೋವಿಂದನರ್ಚಿಸಿ ನೋಡು,
ನಲಿನಲಿದಾಡು ಕೊಂಡಾಡು ॥ ೧೨ ॥

ಜಲಜನಾಭನ ಮೂರ್ತಿ ಮನದಲಿ ನೆಲೆಗೊಳಿಸಿ,
ನಿಶ್ಚಲ ಭಕುತಿಯಲಿ ಚಳಿ ಬಿಸಿಲು ಮಳೆಗಾಳಿಗಳ ನಿಂದಿಸದೆ ನಿತ್ಯದಲಿ,
ನೆಲೆದೊಳಿಹ ಗಂಧವೆ ಸುಗಂಧವು, ಜಲವೆ ರಸ, ರೂಪವೆ ಸುದೀಪವು,
ಎಲರು ಚಾಮರ, ಶಬ್ದ ವಾದ್ಯಗಳರ್ಪಿಸಲು ಒಲಿವ ॥ ೧೩ ॥

ಗೋಳಕಗಳು ರಮಾರಮಣನ ನಿಜಾಲಯಗಳು,
ಅನುದಿನದಿ ಸಂಪ್ರಕ್ಷಾಲನೆಯೆ ಸಮ್ಮಾರ್ಜನವು, ಕರಣಗಳೆ ದೀಪಗಳು,
ಸಾಲು ತತ್ತದ್ವಿಷಯಗಳ ಸಮ್ಮೇಳನವೆ ಪರಿಯಂಕ,
ತತ್ಸುಖದೇಳಿಗೆಯೆ ಸುಪ್ಪತ್ತಿಗೆ, ಆತ್ಮನಿವೇದನವೆ ವಸನ ॥ ೧೪ ॥

ಪಾಪಕರ್ಮವು ಪಾದುಕೆಗಳ ಅನುಲೇಪನವು, ಸತ್ಪುಣ್ಯಶಾಸ್ತ್ರಾಲಾಪನವೆ ಶ್ರೀತುಲಸಿ,
ಸುಮನೋವೃತ್ತಿಗಳೆ ಸುಮನ,
ಕೋಪ ಧೂಪವು, ಭಕ್ತಿ ಭೂಷಣ, ವ್ಯಾಪಿಸಿದ ಸದ್ಬುದ್ಧಿ ಛತ್ರವು,
ದೀಪವೇ ಸುಜ್ಞಾನ, ಆರಾರ್ತಿಗಳೆ ಗುಣಕಥನ ॥ ೧೫ ॥

ಮನವಚನ ಕಾಯಿಕ ಪ್ರದಕ್ಷಿಣೆ, ಯನುದಿನದಿ ಸರ್ವತ್ರ ವ್ಯಾಪಕ–
ವನರುಹೇಕ್ಷಣಗರ್ಪಿಸುತ ಮೋದಿಸುತಲಿರು ಸತತ,
ಅನುಭವಕೆ ತಂದುಕೋ ಸಕಲ ಸಾಧನಗಳೊಳಗಿದೆ ಮುಖ್ಯ,
ಪಾಮರ ಮನುಜರಿಗೆ ಪೇಳಿದರೆ ತಿಳಿಯದು ಬುಧರಿಗಲ್ಲದಲೆ ॥ ೧೬ ॥

ಚತುರವಿಧ ಪುರುಷಾರ್ಥ ಪಡೆವರೆ ಚತುರದಶಲೋಕಗಳ ಮಧ್ಯದೊಳು,
ಇತರುಪಾಯಗಳಿಲ್ಲ ನೋಡಲು ಸಕಲಶಾಸ್ತ್ರದಲಿ,
ಸತತ ವಿಷಯೇಂದ್ರಿಯಗಳಲಿ ಪ್ರವಿತತನೆನಿಸಿ ರಾಜಿಸುವ ಲಕ್ಷ್ಮೀಪತಿಗೆ,
ಸರ್ವಸಮರ್ಪಣೆಯೆ ಮಹಪೂಜೆ ಸದುಪಾಯ ॥ ೧೭ ॥

ಗೋಳಕವೆ ಕುಂಡ, ಅಗ್ನಿ ಕರಣವು, ಮೇಲೊದಗಿ ಬಹವಿಷಯ ಸಮಿಧೆಯು,
ಗಾಳಿ ಯತ್ನವು, ಕಾಮ ಧೂಮವು, ಸನ್ನಿಧಾನಾರ್ಚಿ,
ಮೇಳನವೆ ಪ್ರಜ್ವಾಲೆ, ಕಿಡಿಗಳು ತೂಳಿದಾನಂದಗಳು,
ತತ್ತತ್ಕಾಲ ಮಾತುಗಳೆಲ್ಲ ಮಂತ್ರಾಧ್ಯಾತ್ಮಯಜ್ಞವಿದು ॥ ೧೮ ॥

ಮಧುವಿರೋಧಿಯ ಪಟ್ಟಣಕೆ ಪೂರ್ವದ ಕವಾಟಗಳಕ್ಷಿನಾಸಿಕ,
ವದನ ಶ್ರೋತ್ರುಗಳೆರಡು ದಕ್ಷಿಣ ಉತ್ತರದ್ವಾರ,।
ಗುದಉಪಸ್ಥಗಳೆರಡು ಪಶ್ಚಿಮ ಕದಗಳೆನಿಪವು,
ಷಟ್‌ಸರೋಜವೆ ಸದನ, ಹೃದಯವೆ ಮಂಟಪ, ತ್ರಿಗುಣಂಗಳೆ ಕಲಶ ॥ ೧೯ ॥

ಧಾತುಗಳೆ ಸಪ್ತಾವರಣ, ಉಪವೀಧಿಗಳೆ ನಾಡಿಗಳು,
ಮದಗಳು ಯೂಥಪಗಳು, ಸುಷುಮ್ನನಾಡಿಯೆ ರಾಜಪಂಥಾನ,
ಈ ತನೂರುಹಗಳೆ ವನಂಗಳು, ಮಾತರಿಶ್ವನು ಪಂಚರೂಪದಿ–
ಪಾತಕಿಗಳೆಂಬರಿಗಳನು ಸಂಹರಿಪ ತಳವಾರ ॥ ೨೦ ॥

ಇನಶಶಾಂಕಾದಿಗಳು ಲಕ್ಷ್ಮೀವನಿತೆಯರಸನ ದ್ವಾರಪಾಲಕರೆನಿಸುತಿಪ್ಪರು,
ಮನದ ವೃತ್ತಿಗಳೇ ಪದಾತಿಗಳು,
ಅನುಭವಿಪ ವಿಷಯಂಗಳೆ ಪಟ್ಟಣಕೆ ಬಪ್ಪ ಪಸಾರಗಳು,
ಜೀವನೇ ಸುವರ್ತಕ ಕಪ್ಪಗಳ ಕೈಕೊಂಬ ಹರಿ ತಾನು ॥ ೨೧ ॥

ಉರುಪರಾಕ್ರಮನರಮನಿಗೆ ದಶಕರಣಗಳೆ ಕನ್ನಡಿಯ ಸಾಲುಗಳು,
ಅರವಿದೂರನ ಸದ್ವಿಹಾರಕೆ ಚಿತ್ತ ಮಂಟಪವು,
ಮರಳಿ ಬೀಸುವ ಶ್ವಾಸಗಳು ಚಾಮರ, ವಿಲಾಸಿನಿ ಬುದ್ಧಿ,
ದಾಮೋದರಗೆ ಸಾಷ್ಟಾಂಗ ಪ್ರಣಾಮಗಳೇ ಸುಶಯನಗಳು ॥ ೨೨ ॥

ಮಾರಮಣನರಮನೆಗೆ ಸುಮಹಾದ್ವಾರವೆನಿಸುವ ವದನ ಕೊಪ್ಪುವ ತೋರಣ ಸ್ಮಶ್ರುಗಳು,
ಕೇಶಗಳೇ ಪತಾಕೆಗಳು,
ಊರಿನಡೆವಂಘ್ರಿಗಳು ಜಂಘೆಗಳೂರು ಮಧ್ಯೋದರ ಶಿರಗಳಾಗಾರದ ಉಪ್ಪರಿಗೆಗಳು,
ಕೋಶಗಳೈದು ಕೋಣೆಗಳು ॥ ೨೩ ॥

ಈ ಶರೀರವೆ ರಥ, ಪತಾಕ ಸುವಾಸಗಳು, ಪುಂಡ್ರಗಳು ಧ್ವಜ,
ಸಿಂಹಾಸನವು ಚಿತ್ತವು, ಸುಬುದ್ಧಿಯು ಕಲಶ, ಸನ್ಮನವು ಪಾಶ,
ಗುಣ ದಂಡತ್ರಯಗಳು, ಶುಭಾಶುಭದ್ವಯ ಕರ್ಮ ಚಕ್ರ,
ಮಹಾಸಮರ್ಥಾಶ್ವಗಳು ದಶಕರಣಂಗಳೆನಿಸುವುವು ॥ ೨೪ ॥

ಮಾತರಿಶ್ವನು ದೇಹರಥದೊಳು ಸೂತನಾಗಿಹ ಸರ್ವಕಾಲದಿ,
ಶ್ರೀತರುಣಿವಲ್ಲಭ ರಥಿಕನೆಂದರಿದು ನಿತ್ಯದಲಿ,
ಪ್ರೀತಿಯಿಂದಲಿ ಪೋಷಿಸುತ ವಾತಾತಪಾದಿಗಳಿಂದವಿರತ,
ಈ ತನುವಿನೊಳು ಮಮತೆ ಬಿಟ್ಟವನೆ ಮಹಾಯೋಗಿ ॥ ೨೫ ॥

ಭವವೆನಿಪ ವನಧಿಯೊಳು ಕರ್ಮಪ್ರವಹದೊಳು ಸಂಚರಿಸುತಿಹ-
ದೇಹವೆ ಸುನಾವೆಯು ಮಾಡಿ ತನ್ನವರಿಂದವಡಗೂಡಿ,
ದಿವಸ ದಿವಸಗಳಲ್ಲಿ ಲಕ್ಷ್ಮೀಧವನು ಕ್ರೀಡಿಪನೆಂದು ಚಿಂತಿಸೆ,
ಪವನನಯ್ಯ ಭವಾಬ್ಧಿದಾಟಿಸಿ ಪರಮಸುಖವೀವ ॥ ೨೬ ॥

ಆಪಣಾಲಯಗಳ ಪದಾರ್ಥವು, ಸ್ತ್ರೀಪುರುಷರಿಂದ್ರಿಯಗಳಲಿ,
ದೀಪಪಾವಕರೊಳಗಿಡುವ ತೈಲಾದಿ ದ್ರವ್ಯಗಳ,
ಆ ಪರಮಗವದಾನವೆಂದು ಪದೇಪದೇ ಮರೆಯದಲೆ ಸ್ಮರಿಸುತ,
ಭೂಪನಂದದಿ ಸಂಚರಿಸು ನಿರ್ಭಯದಿ ಸರ್ವತ್ರ ॥ ೨೭ ॥

ವಾರಿಜಭವಾಂಡವೆ ಸುಮಂಟಪ, ಮೇರುಗಿರಿ ಸಿಂಹಾಸನವು,
ಭಾಗೀರಥಿಯೆ ಮಜ್ಜನವು ದಿಗ್ವಸ್ತ್ರಗಳು, ನುಡಿ ಮಂತ್ರ,
ಭೂರುಹಜ ಫಲಪುಷ್ಪ ಗಂಧ ಸಮೀರ ಶಶಿರವಿ ದೀಪ,
ಭೂಷಣ ತಾರಕಗಳು, ಎಂದರ್ಪಿಸಲು ಕೈಕೊಂಡು ಮನ್ನಿಸುವ ॥ ೨೮ ॥

ಭೂಸುರರೊಳಿಪ್ಪಬ್ಜ ಭವನೊಳು ವಾಸುದೇವನು,
ವಾಯುಖಗಪ ಸದಾಶಿವಹಿಪೇಂದ್ರನು ವಿವಸ್ವಾನ್ನಾಮಕ ಸೂರ್ಯ-
ಭೇಶಕಾಮಮರಾಸ್ಯ ವರುಣಾದೀ ಸುರರು ಕ್ಷತ್ರಿಯರೊಳಿಪ್ಪರು,
ವಾಸವಾಗಿಹ ಸಂಕರುಷಣನ ನೋಡಿ ಮೋದಿಪರು ॥ ೨೯ ॥

ಮೀನ ಕೇತನ ತನಯ ಪ್ರಾಣಾಪಾನ ವ್ಯಾನೋದಾನ ಮುಖ್ಯೈಕೋನ ಪಂಚಾಶನ್ಮರುದ್ಗಣ-
ರುದ್ರ ವಸುಗಣರು,
ಮೇನಕಾತ್ಮಜ ಕುವರ ವಿಷ್ವಕ್ಸೇನ ಧನಪಾದ್ಯನಿಮಿಷರನು,
ಸದಾನುರಾಗದಿ ಧೇನಿಪುದು ವೈಶ್ಯರೊಳು ಪ್ರದ್ಯುಮ್ನ ॥ ೩೦ ॥

ಇರುತಿಹರು ನಾಸತ್ಯದಸ್ರರು ನಿರಋತಿಯು ಯಮಧರ್ಮಕಿಂಕರರು-
ಮೇದಿನಿ ಕಾಲಮೃತ್ಯು ಶನೈಶ್ಚರಾದಿಗಳು-
ಕರೆಸಿಕೊಂಬರು ಶೂದ್ರರೆಂದನವರತ,
ಶೂದ್ರರೊಳಿಪ್ಪರು ಇವರೊಳಗರವಿದೂರನಿರುದ್ಧನಿಹನೆಂದರಿದು ಮನ್ನಿಪುದು ॥ ೩೧ ॥

ವೀತಭಯ ನಾರಾಯಣ ಚತುಷ್ಪಾತು ತಾನೆಂದೆನಿಸಿ,
ತತ್ತಜ್ಜಾತಿ ಧರ್ಮ ಸುಕರ್ಮಗಳ ತಾ ಮಾಡಿ ಮಾಡಿಸುತ,
ಚೇತನರ ಒಳಹೊರಗೆ ಓತಪ್ರೋತನಾಗಿದ್ದೆಲ್ಲರಿಗೆ,
ಸಂಪ್ರೀತಿಯಲಿ ಧರ್ಮಾರ್ಥಕಾಮಾದಿಗಳ ಕೊಡುತಿಹನು ॥ ೩೨ ॥

ನಿಧನ ಧನದ ವಿಧಾತ ವಿಗತಾಭ್ಯಧಿಕ ಸಮಸಮವರ್ತಿ ಸಾಮಗ,
ತ್ರಿದಶಗಣಸಂಪೂಜ್ಯ ತ್ರಿಕಕುದ್ಧಾಮ ಶುಭನಾಮ,
ಮಧುಮಥನ ಭೃಗುರಾಮ ಘೋಟಕ ವದನ,
ಸರ್ವಪದಾರ್ಥದೊಳು ತುದಿಮೊದಲು ತುಂಬಿಹನೆಂದು ಚಿಂತಿಸು ಬಿಂಬರೂಪದಲಿ ॥ ೩೩ ॥

ಕನ್ನಡಿಯ ಕೈವಿಡಿದು ನೋಡಲು ತನ್ನಿರವು ಸವ್ಯಾಪಸವ್ಯದಿ ಕಣ್ಣಿಗೊಪ್ಪುವ ತೆರದಿ,
ಅನಿರುದ್ಧನಿಗೆ ಈ ಜಗವು ಭಿನ್ನಭಿನ್ನವೆ ತೋರುತಿಪ್ಪುದು, ।
ಜನ್ಯವಾದುದರಿಂದ ಪ್ರತಿಬಿಂಬನ್ನ–
ಮಯಗಾನೆಂದರಿದು ಪೂಜಿಸಲು ಕೈಕೊಂಬ ॥ ೩೪ ॥

ಬಿಂಬರೆನಿಪರು ಸ್ವೋತ್ತಮರು, ಪ್ರತಿಬಿಂಬರೆನಿಪರು ಸ್ವಾವರರು,
ಪ್ರತಿಬಿಂಬ ಬಿಂಬಗಳೊಳಗೆ ಕೇವಲ ಬಿಂಬ ಹರಿಯೆಂದು,
ಸಂಭ್ರಮದಿ ಪಾಡುತಲಿ ನೋಡುತ ಉಂಬುಡುವುದಿಡುವುದು ಕೊಡುವುದೆಲ್ಲ,
ಅಂಬುಜಾಂಬಕನಂಘ್ರಿ ಪೂಜೆಗಳೆಂದು ನಲಿದಾಡು ॥ ೩೫ ॥

ನದಿಯ ಜಲ ನದಿಗೆರೆವ ತೆರದಂದದಲಿ,
ಭಗವದ್ದತ್ತ ಧರ್ಮಗಳು ಉದಧಿಶಯನನಿಗರ್ಪಿಸುತ ವ್ಯಾವೃತ್ತ ನೀನಾಗಿ,
ವಿಧಿನಿಷೇಧಾದಿಗಳಿಗೊಳಗಾಗದಲೆ ನೋಡುತ,
ದರ್ವಿಯಂದದಿ ಪದುಮನಾಭನ ಸಕಲ ಕರ್ಮಗಳಲ್ಲಿ ನೆನೆವುತಿರು ॥ ೩೬ ॥

ಅರಿಯದಿರ್ದರು ಎಮ್ಮೊಳಿದ್ದನವರತ ವಿಷಯಗಳುಂಬ,
ಜ್ಞಾನೋತ್ತರದಿ ತನಗರ್ಪಿಸಲು ಚಿತ್ಸುಖವಿತ್ತು ಸಂತೈಪ,
ಸರಿತು ಕಾಲಪ್ರವಹಗಳು ಕಂಡರೆಯು ಸರಿ ಕಾಣದಿರೆ ಪರಿವವು,
ಮರಳಿ ಮಜ್ಜನ ಪಾನ ಕರ್ಮಗಳಿಂದ ಸುಖವಿಹವು ॥ ೩೭ ॥

ಏನು ಮಾಡುವ ಕರ್ಮಗಳು ಲಕ್ಷ್ಮೀನಿವಾಸನಿಗರ್ಪಿಸನುಸಂಧಾನ ಪೂರ್ವಕದಿಂದ–
ಸಂದೇಹಿಸದೆ ದಿನದಿನದಿ,
ಮಾನನಿಧಿ ಕೈಕೊಂಡು ಸುಖವಿತ್ತಾನತರ ಸಂತೈಪ,
ತೃಣ ಜಲ ಧೇನು ತಾನುಂಡನವರತ ಪಾಲ್ಗರೆವ ತೆರದಂತೆ ॥ ೩೮ ॥

ಪೂರ್ವ ದಕ್ಷಿಣ ಪಶ್ಚಿಮೋತ್ತರ ಪಾರ್ವತೀಪತಿ ಅಗ್ನಿವಾಯು ಸುಶಾರ್ವರೀಚರ,
ದಿಗ್ವಲಯದೊಳು ಹಂಸನಾಮಕನು,
ಸರ್ವಕಾಲದಿ ಸರ್ವರೊಳು ಸುರಸಾರ್ವಭೌಮನು ಸ್ವೇಚ್ಛೆಯಲಿ–
ಮರ್ತ್ಯೋರ್ವರಿಗೆ ಗೋಚರಿಸದ ಅವ್ಯಕ್ತಾತ್ಮನೆಂದೆನಿಪ ॥ ೩೯ ॥

ಪರಿ ಇಡಾವತ್ಸರನು ಸಂವತ್ಸರ ದೊಳನಿರುದ್ಧಾದಿ ರೂಪವ ಧರಿಸಿ,
ಬಾರ್ಹಸ್ಪತ್ಯ ಸೌರಭ ಚಾಂದ್ರಮನು ಎನಿಸಿ ಇರುತಿಹ ಜಗನ್ನಾಥ ವಿಠಲ,
ಸ್ಮರಿಸುವವರನು ಸಂತೈಪನೆಂದು
ಉರುಪರಾಕ್ರಮ ಉಚಿತಸಾಧನ ಯೋಗ್ಯತೆಯನರಿತು ॥ ೪೦ ॥

॥ ಇತಿ ಶ್ರೀ ವಿಭೂತಿ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

## ॥ ೬. ಶ್ರೀ ಪಂಚಮಹಾಯಜ್ಞ ಸಂಧಿ ॥

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ,
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥

ಜನನಿ ಪಿತ ಭೂ ವಾರಿದಾಂಬರವೆನಿಪ ಪಂಚಾಗ್ನಿಯಲಿ–
ನಾರಾಯಣನ ತ್ರಿಂಶತಿ ಮೂರ್ತಿಗಳ ವ್ಯಾಪಾರ ವ್ಯಾಪ್ತಿಗಳ ನೆನೆದು,
ದಿವಸಗಳೆಂಬ ಸಮಿಧೆಗಳನು ನಿರಂತರ ಹೋಮಿಸುತ,
ಪಾವನಕೆ ಪಾವನ ನೆನಿಪ ಪರಮನ ಬೇಡು ಪರಮಸುಖ ॥ ೧ ॥

ಗಗನ ಪಾವಕ ಸಮಿಧೆ, ರವಿ ರಶ್ಮಿಗಳೆ ಧೂಮವು,
ಅರ್ಚಿಯೆನಿಪುದು ಹಗಲು, ನಕ್ಷತ್ರಗಳು ಕಿಡಿಗಳು, ಚಂದ್ರಮಾಂಗಾರ,
ಮೃಗವರೋದರನೊಳಗೆ ಐದು ರೂಪಗಳ ಚಿಂತಿಸಿ–
ಭಕ್ತಿರಸ ಮಾತುಗಳೆ ಮಂತ್ರವ ಮಾಡಿ ಹೋಮಿಸುವರು ವಿಪಶ್ಚಿತರು ॥ ೨ ॥

ಪಾವಕನು ಪರ್ಜನ್ಯ ಸಮಿಧೆಯು, ಪ್ರಾವಹೀಪತಿ ಧೂಮಗಳು,
ಮೇಘಾವಳಿಗಳರ್ಚಿ, ಕ್ಷಣಪ್ರಭೆ ಗರ್ಜನವೆ ಕಿಡಿಯು,
ಭಾವಿಸುವುದಂಗಾರ ಸಿಡಿಲೆಂದು,
ಈ ವಿಧಾಗ್ನಿಯೊಳಬ್ಧಿಜಾತನ ಕೋವಿದರು ಹೋಮಿಸುವರನುದಿನ ಪರಮ ಭಕುತಿಯಲಿ ॥ ೩ ॥

ಧರಣಿಯೆಂಬುದೆ ಅಗ್ನಿ, ಸಂವತ್ಸರವೆ ಸಮಿಧೆ, ವಿಹಾಯಸವೆ ಪೊಗೆ,
ಇರಳುರಿ ದಿಶಾಂಗಾರ, ಅವಾಂತರದಿಗ್ವಲಯ ಕಿಡಿಯು,
ವರುಷವೆಂಬಾಹುತಿಗಳಿಂದಲಿ ಹರಿಯ ಮೆಚ್ಚಿಸಿ,
ಸಕಲರೊಳಗಧ್ವರಿಯನಾಗಿರು ಸರ್ವರೂಪಾತ್ಮಕನ ಚಿಂತಿಸುತ ॥ ೪ ॥

ಪುರುಷ ಶಿಖಿ, ವಾಕ್ಸಮಿಧೆ, ಧೂಮವು ಕರಣ, ಅರ್ಚಿಯು ಜಿಹ್ವೆ,
ಶ್ರೋತ್ರಗಳೆರಡು ಕಿಡಿಗಳು, ಲೋಚನಗಳಂಗಾರವೆನಿಸುವುವು,
ನಿರುತ ಭುಂಜಿಸುವನ್ನ ಯದುಕುಲವರನಿಗವದಾನಗಳು–
ಯಂದೀಪರಿ ಸಮರ್ಪಣೆ ಗೈಯೆ ಕೈಗೊಂಡನುದಿನದಿ ಪೊರೆವ ॥ ೫ ॥

ಮತ್ತೆ ಯೋಷಾಗ್ನಿಯೊಳು ತಿಳಿವುದು ಉಪಸ್ಥತತ್ತ್ವವೆ ಸಮಿಧೆ,
ಕಾಮೋತ್ಪತ್ತಿ ಪರಮಾತುಗಳು ಧೂಮವು, ಯೋನಿ ಮಹದರ್ಚಿ,
ತತ್ಪ್ರವೇಶಾಂಗಾರ, ಕಿಡಿಗಳು ಉತ್ಸಹಗಳುತ್ಸರ್ಜನವೆ,
ಪುರುಷೋತ್ತಮನಿಗವದಾನವೆನೆ ಕೈಕೊಂಡು ಮನ್ನಿಸುವ ॥ ೬ ॥

ಐದು ಅಗ್ನಿಗಳಲ್ಲಿ ಮರೆಯದೆ ಐದು ರೂಪಾತ್ಮಕನ–
ಇಪ್ಪತ್ತೈದು ರೂಪಗಳನುದಿನದಿ ನೆನೆವರಿಗೆ ಜನ್ಮಗಳ ಐದಿಸನು ನಳಿನಾಕ್ಷ,
ರಣದೊಳು ಮೈದುನನ ಕಾಯ್ದಂತೆ ಸಲಹುವ,
ಬೈದವಗೆ ಗತಿಯಿತ್ತ ಭಯಹರ ಭಕ್ತವತ್ಸಲನು ॥ ೭ ॥

ಪಂಚನಾರೀತುರಗದಂದದಿ ಪಂಚರೂಪಾತ್ಮಕನು ತಾ ಷಟ್ ಪಂಚರೂಪವ ಧರಿಸಿ,
ತತ್ತನ್ನಾಮದಿಂ ಕರೆಸಿ,
ಪಂಚಪಾವಕ ಮುಖದಿ ಗುಣಮಯ ಪಂಚಭೂತಾತ್ಮಕ ಶರೀರವ,
ಪಂಚವಿಧ ಜೀವರಿಗೆ ಕೊಟ್ಟಲ್ಲಲ್ಲೆ ರಮಿಸುವನು ॥ ೮ ॥

ವಿಧಿಭವಾದಿ ಸಮಸ್ತ ಜೀವರ ಹೃದಯದೊಳಗೇಕಾತ್ಮನೆನಿಸುವ ಪದುಮನಾಭನು,
ಅಚ್ಯುತಾನಂತಾದಿರೂಪದಲಿ,
ಅಧಿಸುಭೂತಾಧ್ಯಾತ್ಮವಧಿದೈವದೊಳು ಕರೆಸುವ,
ಪ್ರಾಣನಾಗಾಭಿದನು ದಶರೂಪದಲಿ ದಶವಿಧಪ್ರಾಣರೊಳಗಿದ್ದು ॥ ೯ ॥

ಈರೈದು ಸಾವಿರದ ಇಪ್ಪತ್ತಾರಧಿಕ ಮುನ್ನೂರು ರೂಪಗಳೀರೆರಡು ಸ್ಥಾನದಲಿ–
ಚಿಂತಿಪುದನುದಿನದಿ ಬುಧರು,
ನೂರು ಇಪ್ಪತ್ತೇಳಧಿಕ ಮೂರಾರು ಸಾವಿರ ರೂಪದಿಂ–
ದಶಮಾರುತರೊಳಿದ್ದವರವರ ಪೆಸರಿಂದ ಕರೆಸುವನು ॥ ೧೦ ॥

ಚಿತ್ತೈಸುವುದು ಎಂಟಧಿಕ ಇಪ್ಪತ್ತು ಸಾವಿರ ನಾಲ್ಕುಶತದೈವತ್ತು ಮೂರು ಸುಮೂರ್ತಿಗಳು–
ಅಹವಲ್ಲೆ ಪರಿಯಂತ,
ಹತ್ತು ನಾಲಕು ರೂಪಗಳ ನೆರೆ ಬಿತ್ತರವ ಯೀಪರಿ ತಿಳಿದು,
ಪುರುಷೋತ್ತಮನ ಸರ್ವತ್ರ ಪೂಜೆಯ ಮಾಡು ಕೊಂಡಾಡು ॥ ೧೧ ॥

ಈರೆರಡುಶತ ದ್ವ್ಯಷ್ಟಧಿಕ ಹದಿನಾರುಸಾವಿರ ರೂಪ ಸರ್ವ
ಶರೀರದೊಳು ಶಬ್ದಾದಿಗಳಧಿಷ್ಠಾನದೊಳಗಿಪ್ಪ-
ಮಾರುತನು ನಾಗಾದಿ ರೂಪದಿ ಮೂರನೇ ಗುಣಮಾನಿ ಶ್ರೀ ದುರ್ಗಾರಮಣ
ವಿದ್ಯಾಕುಮೋಹವ ಕೊಡುವ ಕರಣಕ್ಕೆ ॥ ೧೨ ॥

ಐದವಿದ್ಯೆಗಳೊಳಗೆ ಇಹ ನಾಗಾದಿಗಳಧಿಷ್ಠಾನದಲಿ ಲಕ್ಷ್ಮೀಧವನು
ಕೃದ್ಧೋಲ್ಕ ಮೊದಲಾದೈದು ರೂಪಗಳ ತಾ ಧರಿಸಿ ಸಜ್ಜನರವಿದ್ಯವ ಛೇದಿಸುವ,
ತಾಮಸರಿಗಜ್ಞಾನಾದಿಗಳ ಕೊಟ್ಟವರವರ-
ಸಾಧನವ ಮಾಡಿಸುವ ॥ ೧೩ ॥

ಗೋವುಗಳೊಳುದ್ಗೀಥನಿಹ, ಪ್ರಸ್ತಾವ ಹಿಂಕಾರೆರಡು ರೂಪದಿ-
ಆವಿ ಅಜಗಳೊಳಿಹನು, ಪ್ರತಿಹಾರಾಹ್ವ ಹಯಗಳೊಳು,
ಜೀವನಪ್ರದ ನಿಧನ ಮನುಜರೊಳು, ಈ ವಿಧದೊಳಿಹ ಪಂಚಸಾಮವ-
ಝಾವ ಝಾವಕೆ ನೆನೆವರಿಗೆ ಐದಿಸನು ಜನ್ಮಗಳ ॥ ೧೪ ॥

ಯುಗಚತುಷ್ಟಯಗಳಲಿ ತಾನಿದ್ದ್ಯುಗಪ್ರವರ್ತಕ-
ಧರ್ಮಕರ್ಮಗಳಿಗೆ ಪ್ರವರ್ತಕ ವಾಸುದೇವಾದೀರೆರಡು ರೂಪತೆಗೆದು ಕೊಂಡು,
ಯುಗಾದಿಕೃತು ತಾ ಯುಗಪ್ರವರ್ತಕಯೆನಿಸಿ,
ಧರ್ಮಪ್ರಘಟಕನು ತಾನಾಗಿ ಭಕುತರಿಗೀವ ಸಂಪದವ ॥ ೧೫ ॥

ತಲೆಯೊಳಿಹ ನಾರಾಯಣನು, ಗಂಟಲಡಿ ಒಡಲೊಳು ವಾಸುದೇವನು,
ಬಲದಲಿಹ ಪ್ರದ್ಯುಮ್ನ, ಎಡಭಾಗದಲನಿರುದ್ಧ,
ಕೆಳಗಿನಂಗದಿ ಸಂಕರುಷಣನ ತಿಳಿದು,
ಈ ಪರಿ ಸಕಲ ದೇಹಗಳೊಳಗೆ ಪಂಚಾತ್ಮಕನ ರೂಪವ ನೋಡು ಕೊಂಡಾಡು ॥ ೧೬ ॥

ತನುವಿಶಿಷ್ಟದಿ ಇಪ್ಪ ನಾರಾಯಣನು,
ಕಟಿಪಾದಾಂತ ಸಂಕರುಷಣನು, ಶಿರಜಘನಾಂತ ವಾಗಿಹ ವಾಸುದೇವಾಖ್ಯ,
ಅನಿಮಿಷೇಷನಿರುದ್ಧ ಪ್ರದ್ಯುಮ್ನನು ಎಡದಿ ಬಲಭಾಗದಿ,
ಚಿಂತನೆಯ ಮಾಳ್ಪರಿಗುಂಟೆ ಮೈಲಿಗೆ ವಿಧಿನಿಷೇಧಗಳು ॥ ೧೭ ॥

ಪದುಮನಾಭನು ಪಾಣಿಯೊಳಗಿಹ, ವದನದಲಿ ಹೃಷೀಕೇಶ,
ನಾಸಿಕ ಸದನದಲಿ ಶ್ರೀಧರನು, ಜಿಹ್ವೆಯೊಳಿಪ್ಪ ವಾಮನನು,
ವಿದಿತ ನೇತ್ರದಿ ತ್ರಿವಿಕ್ರಮನು, ಮಧುಹ ತ್ವಗ್ದೇಶದೊಳಗಿಹ,
ಕರ್ಣದಲಿ ಇಪ್ಪನು ವಿಷ್ಣುನಾಮಕ ಶ್ರವಣನೆಂದೆನಿಸಿ ॥ ೧೮ ॥

ಮನದೊಳಿಹ ಗೋವಿಂದ, ಮಾಧವ ಧನಪಸಖತತ್ತ್ವದೊಳು,
ನಾರಾಯಣ ಮಹತ್ತತ್ವದೊಳು, ಅವ್ಯಕ್ತದೊಳು ಕೇಶವನು,
ಇನಿತು ರೂಪವ ದೇಹದೊಳು ಚಿಂತನೆಯ ಗೈವ ಮಹಾತ್ಮರಿಳೆಯೊಳು–
ಮನುಜರವರಲ್ಲಮರರೇ ಸರಿ ಹರಿಕೃಪಾಬಲದಿ ॥ ೧೯ ॥

ನೆಲದೊಳಿಪ್ಪನು ಕೃಷ್ಣರೂಪದಿ, ಜಲದೊಳಿಪ್ಪನು ಹರಿಯೆನಿಸಿ,
ಶಿಖಿಯೊಳಗೆ ಇಪ್ಪನು ಪರಶುರಾಮ ಉಪೇಂದ್ರನೆಂದೆನಿಸಿ,
ಎಲರೊಳಿಪ್ಪನು ಜನಾರ್ದನನು, ಬಾಂದಳದೊಳಚ್ಯುತ,
ಗಂಧ ನರಹರಿ, ಪೊಳೆವಧೋಕ್ಷಜ ರಸಗಳೊಳು ರಸರೂಪ ತಾನಾಗಿ ॥ ೨೦ ॥

ರೂಪ ಪುರುಷೋತ್ತಮನು, ಸ್ಪರ್ಶ ಪ್ರಾಪಕನು ಅನಿರುದ್ಧ,
ಶಬ್ದದಿ ವ್ಯಾಪಿಸಿಹ ಪ್ರದ್ಯುಮ್ನ, ಉಪಸ್ಥದಿ ವಾಸುದೇವನಿಹ,
ತಾ ಪೊಳೆವ ಪಾಯುಸ್ಥನಾಗಿ ಜಯಾಪತಿಯು ಸಂಕರುಷಣನು,
ಸುಸ್ಥಾಪಕನೆನಿಸಿ ಪಾದದೊಳು ದಾಮೋದರನು ಪೊಳೆವ ॥ ೨೧ ॥

ಚತುರವಿಂಶತಿ ತತ್ತ್ವದೊಳು ಶ್ರೀಪತಿಯೆ ಅನಿರುದ್ಧಾದಿ ರೂಪದಿ,
ವಿದಿತನಾಗಿದ್ದಖಿಲ ಜೀವರ ಸಂಹನನದೊಳಗೆ,
ಪ್ರತತಿ ಯಂದದಿ ಸುತ್ತುಸುತ್ತುತ ಪಿತೃಗಳಿಗೆ ತರ್ಪಕನೆನಿಸಿಕೊಂಡತುಳಮಹಿಮನು,
ಷಣ್ಣವತಿನಾಮದಲಿ ನೆಲೆಸಿಹನು ॥ ೨೨ ॥

ಚತುರವಿಂಶತಿ ತತ್ತ್ವದೊಳು ತತ್ಪತಿಗಳೆನಿಸುವ ಬ್ರಹ್ಮ ಮುಖ ದೇವತೆಗಳೊಳು,
ಹನ್ನೊಂದುನೂರೈವತ್ತೆರಡು ರೂಪ–
ವಿತತನಾಗಿದ್ದೆಲ್ಲ ಜೀವರ ಜತನ ಮಾಡುವ ಗೋಸುಗ,
ಜಗತ್ಪತಿಗೆ ಏನಾದರು ಪ್ರಯೋಜನವಿಲ್ಲ ವಿದರಿಂದ ॥ ೨೩ ॥

ಇಂದಿರಾಧವ ಶಕ್ತಿ ಮೊದಲಾದೊಂದಧಿಕ ದಶರೂಪದಿಂದಲಿ,
ಪೊಂದಿಹನು ಸಕಲೇಂದ್ರಿಯಗಳಲಿ ಪುರುಷನಾಮಕನು,
ಸುಂದರಪ್ರದ ಪೂರ್ಣಜ್ಞಾನಾನಂದಮಯ ಚಿದ್ದೇಹದೊಳು,
ತಾನೊಂದರಕ್ಷಣವಗಲದಲೆ ಪರಮಾಪ್ತನಾಗಿಪ್ಪ ॥ ೨೪ ॥

(೨೫–೨೬ ಜ್ಯೋತಿಯಾಗಿ ಓದಬೇಕು)

ಆರಧಿಕ ದಶರೂಪದಿಂದಲಿ ತೋರುತಿಪ್ಪನು ವಿಶ್ವ,
ಲಿಂಗಶರೀರದೊಳು ತೈಜಸನು–ಪ್ರಾಜ್ಞನು–ತುರ್ಯನಾಮಕನು,
ಮೂರೈದು ರೂಪಗಳ ಧರಿಸುತಲಿ–ಈರೈದು ಕರಣದೊಳು ಮಾತ್ರದಿ–
ಖೇರ ಶಿಖಿ ಜಲಭೂಮಿಯೊಳಗಿಹನು, ಆತ್ಮನಾಮದಲಿ ॥ ೨೫ ॥

ಮನದೊಳು, ಆಹಂಕಾರದೊಳು ಚಿಂತನೆಯ ಮಾಳ್ಪುದು ಅಂತರಾತ್ಮನ,
ಘನ ಸುತತ್ತ್ವದಿ ಪರಮನ, ಅವ್ಯಕ್ತದಲಿ ಜ್ಞಾನಾತ್ಮ,
ಇನಿತು ಪಂಚಾಶದ್ವರಣ ವೇದ್ಯನ ಅಜಾದ್ಯೈವತ್ತು ಮೂರ್ತಿಗಳನು,
ಸದಾ ಸರ್ವತ್ರ ದೇಹಗಳಲ್ಲಿ ಪೂಜಿಪುದು ॥ ೨೬ ॥

ಚತುರವಿಂಶತಿ ತತ್ತ್ವದೊಳು ತತ್ಪತಿಗಳೆನಿಸುವ ಬ್ರಹ್ಮಮುಖ ದೇವತೆಗಳೊಳು,
ಹದಿಮೂರು ಸಾವಿರದೆಂಟು ನೂರಧಿಕ ಚತುರವಿಂಶತಿ ರೂಪದಿಂದಲಿ,
ವಿತತನಾಗಿದ್ದೆಲ್ಲರೊಳು ಪ್ರಾಕೃತ ಪುರುಷನಂದದಲಿ–
ಪಂಚಾತ್ಮಕನು ರಮಿಸುವನು ॥ ೨೭ ॥

ಕೇಶವಾದಿ ಸುಮೂರ್ತಿ ದ್ವಾದಶ ಮಾಸ ಪುಂಡ್ರಗಳಲ್ಲಿ,
ವೇದವ್ಯಾಸ ಅನಿರುದ್ಧಾದಿ ರೂಪಗಳಾರು ಋತುಗಳಲಿ,
ವಾಸವಾಗಿಹನೆಂದು ತ್ರಿಂಶತಿ ವಾಸರದಿ,
ಸತ್ಕರ್ಮ ಧರ್ಮ ನಿರಾಶೆಯಿಂದಲಿ ಮಾಡು ಕರುಣವ ಬೇಡು ಕೊಂಡಾಡು ॥ ೨೮ ॥

ಲೋಷ್ಠಕಾಂಚನ ಲೋಹಶೈಲಜ ಕಾಷ್ಟವೊದಲಾದಖಿಳ ಜಡ,
ಪರಮೇಷ್ಟಿ ಮೊದಲಾದಖಿಳಚೇತನರೊಳಗೆ ಅನುದಿನವು ಚೇಷ್ಟೆಗಳ ಮಾಡಿಸುತ ತಿಳಿಸದೆ,
ಪ್ರೇಷ್ಠನಾಗಿದ್ದೆಲ್ಲರಿಗೆ,
ಸರ್ವೇಷ್ಟದಾಯಕ ಸಂತೈಸುವನು ಸರ್ವ ಜೀವರನು ॥ ೨೯ ॥

ವಾಸುದೇವನಿರುದ್ಧ ರೂಪದಿ ಪುಂಶರೀರದೊಳಿಹನು,
ಸರ್ವದ ಸ್ತ್ರೀಶರೀರದೊಳಿಹನು ಸಂಕರುಷಣನು–ಪ್ರದ್ಯುಮ್ನ,
ದ್ವಾಸುಪರ್ಣಶ್ರುತಿವಿನುತ ಸರ್ವಾಸುನಿಲಯ ನಾರಾಯಣನ–
ಸದುಪಾಸನೆಯ ಗೈವವರು ಜೀವನ್ಮುಕ್ತರೆನಿಸುವರು ॥ ೩೦ ॥

ತನ್ನನಂತಾನಂತ ರೂಪ ಹಿರಣ್ಯಗರ್ಭಾದಿಗಳೊಳಗೆ ಕಾರುಣ್ಯಸಾಗರ ಹರಹಿ,
ಅವರವರಖಿಳ ವ್ಯಾಪಾರ ಬನ್ನಬಡದಲೆ ಮಾಡಿ ಮಾಡಿಸಿ,
ಧನ್ಯರೆನಿಸಿ ಸಮಸ್ತ ದಿವಿಜರ, ।
ಪುಣ್ಯಕರ್ಮವ ಸ್ವೀಕರಿಸಿ ಸುಖವಿತ್ತು ಪಾಲಿಸುವ ॥ ೩೧ ॥

ಸಾಗರದೊಳಿಹ ನದಿಯ ಜಲಭೇದಾಗಸದೊಳಿಪ್ಪಬ್ದ ಬಲ್ಲವು,
ಕಾಗೆಗುಬ್ಬಿಗಳರಿಯಬಲ್ಲವೆ ನದಿಯ ಜಲಸ್ಥಿತಿಯ,
ಭೋಗಿವರ ಪರಿಯಂಕ ಶಯನನೊಳೀ ಗುಣತ್ರಯಬದ್ಧ ಜಗವಿಹುದು,
ಆಗಮಜ್ಞರು ತಿಳಿವರಜ್ಞಾನಿಗಳಿಗಳವಡದು ॥ ೩೨ ॥

ಕರಣಗುಣಭೂತಗಳೊಳಗೆ ತದ್ವರನೆನಿಪ ಬ್ರಹ್ಮಾದಿ ದಿವಿಜರೊಳರಿತು,
ರೂಪ ಚತುಷ್ಟಯಗಳನುದಿನದಿ ಸರ್ವತ್ರ ಸ್ಮರಿಸುತನುಮೋದಿಸುತ ಹಿಗ್ಗುತ-
ಪರವಶದಿ ಪಾಡುವರಿಗೆ, ತನ್ನಿರವ ತೋರಿಸಿ,
ಭವವಿಮುಕ್ತರ ಮಾಡಿ ಪೋಷಿಸುವ ॥ ೩೩ ॥

ಮೂಲರೂಪನು ಮನದೊಳಿಹ, ಶ್ರವಣಾಲಿಯೊಳಗಿಹ ಮತ್ಸ್ಯ,
ಕೂರ್ಮನು ಕೋಲರೂಪನು ತ್ವಕ್, ರಸನದೊಳಗಿಪ್ಪ ನರಸಿಂಹ,
ಬಾಲವಟು ವಾಮನನು ನಾಸಿಕ ನಾಳದೊಳು, ವದನದಲಿ ಭಾರ್ಗವ,
ವಾಲಿಭಂಜನ ಹಸ್ತದೊಳು, ಪಾದ ಶ್ರೀಕೃಷ್ಣ ॥ ೩೪ ॥

ಜಿನ ವಿಮೋಹಕ ಬುದ್ಧ ಪಾಯುಗ, ದನುಜಭಂಜನ ಕಲ್ಕಿ ಮೇಢ್ರದಿ,
ಇನಿತು ದಶರೂಪಗಳ ದಶಕರಣಂಗಳಲಿ ತಿಳಿದು,
ಅನುಭವಿಪ ವಿಷಯಂಗಳು ಕೃಷ್ಣಾರ್ಪಣವೆನಲು ಕೈಕೊಂಬ,
ವೃಜಿನಾರ್ದನ ವರ ಜಗನ್ನಾಥ ವಿಠಲ ವಿಶ್ವವ್ಯಾಪಕನು ॥ ೩೫ ॥

॥ ಇತಿ ಶ್ರೀ ಪಂಚಮಹಾಯಜ್ಞ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

## ॥ ೭. ಶ್ರೀ ಪಂಚತನ್ಮಾತ್ರ ಸಂಧಿ ॥

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ,
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥

ಭೂ ಸಲಿಲ ಶಿಖಿ ಪವನ ಭೂತಾಕಾಶದೊಳಗೈದೈದು ತನ್ಮಾತ್ರಾಸಹಿತ-
ಒಂದಧಿಕ ಪಂಚಾಶದ್ವರಣ ವೇದ್ಯ,
ಈ ಶರೀರದಿ ವ್ಯಾಪಿಸಿದ್ದು ಸುರಾಸುರರಿಗೆ ನಿರಂತರದಲಿ,
ಸುಖಾಸುಖಪ್ರದನಾಗಿ ಆಡುವ ದ್ವೇಷಿಪರ ಬಡಿವ ॥ ೧ ॥

ಪ್ರಣವಪ್ರತಿಪಾದ್ಯ ತ್ರಿನಾಮದಿ ತನುವಿನೊಳು-
ತ್ರಿಸ್ಥಾನಗನಿರುದ್ಧನು ತ್ರಿಪಂಚಕ ಏಕವಿಂಶತಿ ಚತುರವಿಂಶತಿಗನೆನಿಸಿ,
ಎಪ್ಪತ್ತೆರಡು ಸಾವಿರ ಇನಿತು ನಾಡಿಗಳೊಳು ನಿಯಾಮಿಸುತ ಇನಗಭಸ್ತಿಗ
ಲೋಕದೊಳು ಸರ್ವತ್ರ ಬೆಳಗುವನು ॥ ೨ ॥

ಜೀವಲಿಂಗನಿರುದ್ಧ ಸ್ಥೂಲ ಕಳೇವರಗಳಲಿ,
ವಿಶ್ವ ತುರಗಗ್ರೀವ ಮೂಲೇಶಾಚ್ಯುತತ್ರಯ ಹಂಸ ಮೂರ್ತಿಗಳ,
ಈ ವಿಧ ಚತು:ಸ್ಥಾನದಲಿ ಶಾಂತೀವರನ ಈರೆರಡು ರೂಪದಿ,
ಭಾವಿಸುವುದೇಕೋನವಿಂಶತಿ ಮೂರ್ತಿ ಸರ್ವತ್ರ ॥ ೩ ॥

ಕಲುಷವಿಲ್ಲದ ದರ್ಪಣದಿ ಪ್ರತಿಫಲಿಸಿ ಸರ್ವ ಪದಾರ್ಥಗಳು ಕಂಗೊಳಿಸುವಂದದಲಿ,
ಬಿಂಬಜಡಚೇತನಗಳೊಳಗಿದ್ದು ಪೊಳೆವ ಬಹುರೂಪದಲಿ,
ಸಜ್ಜನರೊಳಗೆ ಮನದರ್ಪಣದಿ ತಾ,
ನಿಶ್ಚಲ ನಿರಾಮಯ ನಿರ್ವಿಕಾರ ನಿರಾಶ್ರಯಾನಂತ ॥ ೪ ॥

ಈ ಶರೀರ ಚತುಷ್ಟಯಗಳೊಳು ಕೋಶಧಾತುಗ ಭಾರತಿಪ–
ಪ್ರಾಣೇಶನಿಪ್ಪತ್ತೊಂದು ಸಾವಿರದಾರುನೂರೆನಿಪ ಶ್ವಾಸರೂಪಕ ಹಂಸ,
ಭಾಸ್ಕರ ಭೇಶರೊಳಗಿದ್ದವರ ಕೈವಿಡಿದು,
ಈ ಸರೋಜಭವಾಂಡದೊಳು ಸರ್ವತ್ರ ತುಂಬಿಹನು ॥ ೫ ॥

ಶಿರಗಳೈದು, ಐದೆರಡು ಬಾಹುಗಳು, ಎರಡು ಪಾದಗಳು,
ಒಂದು ಮಧ್ಯೋದರದಿ ಶೋಭಿಪ, ವಾಙ್ಮನೋಮಯನೆನಿಸಿ ನಿತ್ಯದಲಿ,
ಕರಣಧಾತುಗಳಲ್ಲಿ ಎಪ್ಪತ್ತೆರಡು ಸಾವಿರ ನಾಡಿಗಳಲಿಪ್ಪ,
ಅರವಿದೂರನು ಭಾರತಪ್ರತಿಪಾದ್ಯನೆಂದೆನಿಸಿ ॥ ೬ ॥

ಈರೆರಡು ದೇಹೋರ್ಮಿಭೂತಗಳಾರಧಿಕದಶ ಋಗ್ವಿನುತ,
ಲಕ್ಷ್ಮೀರಮಣ ವಿಷ್ಣ್ವಾಖ್ಯರೂಪದಿ ಚತುಷಷ್ಟಿಕಲಾ ಧಾರಕನು ತಾನಾಗಿ,
ಬ್ರಹ್ಮ ಪುರಾರಿ ಮುಖ್ಯರೊಳಿದ್ದು ಸತತ ವಿಹಾರ ಮಾಳ್ಪನು,
ಚತುಷ್ಪಾದಾಹ್ವಯದಿ ಲೋಕದೊಳು ॥ ೭ ॥

ತೃಣ ಮೊದಲು ಬ್ರಹ್ಮಾಂತ ಜೀವರ ತನುಗಳತ್ರಯಗಳಲಿ,
ನಾರಾಯಣನ ಸಾವಿರದ್ಯೈದು ನೂರಿಪ್ಪತ್ತು ಮೇಲಾರು ಗಣನೆ ಮಾಳ್ಪುದು ಬುಧರು ರೂಪವ,
ಘೃಣಿ: ಸೂರ್ಯಾದಿತ್ಯನಾಮಗಳನುದಿನದಿ–
ಜಪಿಸುವರಿಗೀವಾರೋಗ್ಯಸಂಪದವ ॥ ೮ ॥

ಐದುನೂರೆಪ್ಪತ್ತು ನಾಲಕು ಆಧಿಭೌತಿಕದಲ್ಲಿ ತಿಳಿವುದು,
ಐದೆರಡು ಶತ ಏಕವಿಂಶತಿ ರೂಪವಧ್ಯಾತ್ಮ,
ಭೇದಗಳಿನ್ನೂರು ಮೂವತ್ತಾದ ಮೇಲೊಂದಧಿಕ ಮೂರ್ತಿಗಳು–
ಆದರದಲಧಿದೈವದೊಳು ಚಿಂತಿಪುದು ಭೂಸುರರು ॥ ೯ ॥

ಸುರುಚಿ ಶಾರ್ವರೀಕರನೆನಿಸಿ ಸಂಕರುಷಣ ಪ್ರದ್ಯುಮ್ನ
ಶಶಿ ಭಾಸ್ಕರರೊಳಗೆ ಅರವತ್ತಧಿಕ ಮುನ್ನೂರು ರೂಪದಲಿ ಕರೆಸಿಕೊಂಬನು,
ಅಹಸ್ಸಂವತ್ಸರನೆನಿಪನು,
ವಿಶಿಷ್ಟನಾಮದಲಿ ಅರಿತವರಿಗೆ ಆರೋಗ್ಯಭಾಗ್ಯವನೀವಾನಂದಮಯ ॥ ೧೦ ॥

ಏಕಪಂಚಾಶದ್ವರಣ ಗತ ಮಾಕಳತ್ರನು ಸರ್ವರೊಳಗೆ–
ಅವ್ಯಾಕೃತಾಕಾಶಾಂತ ವ್ಯಾಪಿಸಿ ನಿಗಮತತಿಗಳನು–
ವ್ಯಾಕರಣ ಭಾರತ ಮುಖಾದ್ಯನೇಕಶಾಸ್ತ್ರ ಪುರಾಣ ಭಾಷ್ಯಾನೀಕಗಳ ಕಲ್ಪಿಸಿ,
ಮನೋವಾಙ್ಮಯನೆನಿಸಿಕೊಂಬ ॥ ೧೧ ॥

ಭಾರಭೃನ್ನಾಮಕನ ಸಾವಿರದಾರನೂರಿಪ್ಪತ್ತುನಾಲಕು ಮೂರುತಿಗಳು,
ಚರಾಚರದಿ ಸರ್ವತ್ರ ತುಂಬಿಹವು,
ಆರುನಾಲಕು ಜಡಗಳಲಿ, ಹದಿನಾರು ಚೇತನಗಳಲಿ ಚಿಂತಿಸೆ,
ತೋರಿಕೊಂಬನು ತನ್ನ ರೂಪವ ಸಕಲ ಠಾವಿನಲಿ ॥ ೧೨ ॥

ಮಿಸುಣಿ ಮೇಲಿಹ ಮಣಿಯುವೋಲ್ ರಾಜಿಸುವ ಬ್ರಹ್ಮಾದಿಗಳ ಮನದಲಿ–
ಬಿಸಿಜಜಾಂಡಾಧಾರಕನು ಆಧೇಯನೆಂದೆನಿಸಿ,
ದ್ವಿಶತ ನಾಲ್ವತ್ತೆರಡು ರೂಪದಿ ಶಶಿಯೊಳಿಪ್ಪನು,
ಶಶದೊಳಗೆ ಶೋಭಿಸುವ ನಾಲ್ವತ್ತೆರಡಧಿಕ ಶತರೂಪದಲಿ ಬಿಡದೆ ॥ ೧೩ ॥

ಎರಡು ಸಾವಿರದೆಂಟು ರೂಪವನರಿತು ಸರ್ವ ಪದಾರ್ಥದಲಿ,
ಶ್ರೀವರನ ಪೂಜೆಯಮಾಡು ವರಗಳ ಬೇಡು ಕೊಂಡಾಡು,
ಬರಿದೆ ಜಲದೊಳು ಮುಳುಗಿ ಬಿಸಿಲೊಳು ಬೆರಳನೆಣಿಸಿದರೇನು,
ಸದ್ಗುರು ಹಿರಿಯರನುಸರಿಸಿ, ಇದರ ಮರ್ಮವನರಿಯದಿಹ ನರನು ॥ ೧೪ ॥

ಮತ್ತೆ ಚಿದ್ದೇಹದ ಒಳಗೆ,
ಎಂಭತ್ತು ಸಾವಿರದೇಳುನೂರಿಪ್ಪತ್ತೈದು ನರಸಿಂಹ ರೂಪದಲಿದ್ದು,
ಜೀವರಿಗೆ ನಿತ್ಯದಲಿ ಹಗಲಿರಳು ಬಪ್ಪಪಮೃತ್ಯುವಿಗೆ ತಾ ಮೃತ್ಯುವೆನಿಸುವ,
ಭೃತ್ಯವತ್ಸಲ ಭಯವಿನಾಶನ ಭಾಗ್ಯಸಂಪನ್ನ ॥ ೧೫ ॥

ಜ್ವರನೊಳಿಪ್ಪತ್ತೇಳು, ಹರನೊಳಗಿರುವನಿಪ್ಪತ್ತೆಂಟು ರೂಪದಿ,
ಎರಡುಸಾವಿರದೆಂಟುನೂರಿಪ್ಪತ್ತೇಳಧಿಕ ಜ್ವರಹರಾಹ್ವಯ ನಾರಸಿಂಹನ–
ಸ್ಮರಣೆಮಾತ್ರದಿ ದುರಿತರಾಶಿಗಳಿರದೆ ಪೋಪವು,
ತರಣಿಬಿಂಬವ ಕಂಡ ಹಿಮದಂತೆ ॥ ೧೬ ॥

ಮಾಸಪರಿಯಂತರವು ಬಿಡದೆ ನೃಕೇಸರಿಯ ಶುಭನಾಮ ಮಂತ್ರ,
ಜಿತಾಸನದಲೇಕಾಗ್ರಚಿತ್ತದಿ ನಿಷ್ಕಪಟದಿಂದ,
ಬೇಸರದೆ ಜಪಿಸಲು ವೃಜಿನಗಳ ನಾಶಗೈಸಿ ಮನೋರಥಗಳ ಪರೇಶ ಪೂರ್ತಿಯ ಮಾಡಿ ಕೊಡುವನು,
ಕಡೆಗೆ ಪರಗತಿಯ ॥ ೧೭ ॥

ಚತುರಮೂರ್ತ್ಯಾತ್ಮಕ ಹರಿಯು ತ್ರಿಂಶತಿಸುರೂಪದಿ ಬ್ರಹ್ಮನೊಳು,
ಮಾರುತನೊಳಿಪ್ಪತ್ತೇಳು ರೂಪದೊಳಿಪ್ಪ ಪ್ರದ್ಯುಮ್ನ,
ಸುತರೊಳಿಪ್ಪತ್ತೈದು ಹದಿನೆಂಟತುಳ ರೂಪಗಳರಿತು,
ವತ್ಸರ ಶತಗಳಲಿ ಪೂಜಿಸುತಲಿರು ಚತುರಾತ್ಮಕನ ಪದವ ॥ ೧೮ ॥

ನೂರು ವರುಷಕೆ ದಿವಸ ಮೂವತ್ತಾರು ಸಾವಿರವಹವು,
ನಾಡಿ ಶರೀರದೊಳಗಿನಿತಿಹವು ಸ್ತ್ರೀಪುಂಭೇದದಲಿ ಹರಿಯ-
ಈರಧಿಕ ಎಪ್ಪತ್ತುಸಾವಿರ ಮೂರುತಿಗಳನೆ ನೆನೆದು,
ಸರ್ವಾಧಾರಕನ ಸರ್ವತ್ರ ಪೂಜಿಸು ಪೂರ್ಣನೆಂದರಿದು ॥ ೧೯ ॥

ಕಾಲಕರ್ಮಗುಣಸ್ವಭಾವಗಳಾಲಯನು ತಾನಾಗಿ,
ಲಕ್ಷ್ಮೀ ಲೋಲ ತತ್ತದ್ರೂಪನಾಮದಿ ಕರೆಸುತೊಳಗಿದ್ದು,
ಲೀಲೆಯಿಂದಲಿ ಸರ್ವಜೀವರ ಪಾಲಿಸುವ-ಸಂಹರಿಪ-ಸೃಷ್ಟಿಪ,
ಮೂಲಕಾರಣ ಪ್ರಕೃತಿ ಗುಣಕಾರ್ಯಗಳ ಮನೆಮಾಡಿ ॥ ೨೦ ॥

ತಿಲಜವರ್ತಿಗಳನುಸರಿಸಿ ಪ್ರಜ್ವಲಿಸಿ ದೀಪಗಳು-
ಆಲಯದ ಕತ್ತಲೆಯು ಭಂಗಿಸಿ ತದ್ಗತಾರ್ಥವ ತೋರುವಂದದಲಿ,
ಜಲರುಹೇಕ್ಷಣ ತನ್ನವರ ಮನದೊಳಗೆ,
ಭಕ್ತಿಜ್ಞಾನ ಕರ್ಮಕೆ ಒಲಿದು ಪೊಳೆವುತ ತೋರುವನು ಗುಣರೂಪಕ್ರಿಯೆಗಳನು ॥ ೨೧ ॥

ಆವ ದೇಹವ ಕೊಡಲಿ, ಹರಿ ಮತ್ತಾವಲೋಕದೊಳಿಡಲಿ,
ತಾ ಮತ್ತಾವದೇಶದೊಳಿಡಲಿ, ಆವಾವಸ್ಥೆಗಳು ಬರಲಿ,
ಈ ವಿಧದಿ ಜಡಚೇತನದೊಳು ಪರಾವರೇಶನ ರೂಪಗುಣಗಳ ಭಾವಿಸುತ,
ಸುಜ್ಞಾನ ಭಕುತಿಯ ಬೇಡು ಕೊಂಡಾಡು ॥ ೨೨ ॥

ಒಂದರೊಳಗೊಂದೊಂದು ಬೆರದಿಹವಿಂದಿರೇಶನ ರೂಪಗಳ-
ಮನಬಂದ ತೆರದಲಿ ಚಿಂತಿಸಿದಕನುಮಾನ ವಿನಿತಿಲ್ಲ,
ಸಿಂಧುರಾಜನೊಳಂಬರಾಲಯ ಬಂಧಿಸಲು,
ಪ್ರತಿ ತಂತುಗಳೊಳು ಉದ-ಬಿಂದು ವ್ಯಾಪಿಸಿದಂತೆ ಇರುತಿಪ್ಪನು ಚರಾಚರದಿ ॥ ೨೩ ॥

ಒಂದು ರೂಪದೊಳೊಂದವಯುವದೊಳೊಂದು ರೋಮದೋಳೊಂದು ದೇಶದಿ,
ಪೊಂದಿ ಇಪ್ಪವಜಾಂಡನಂತಾನಂತ ಕೋಟಿಗಳು,
ಹಿಂದೆ ಮಾರ್ಕಾಂಡೇಯ ಕಾಣನೆ,
ಒಂದು ರೂಪದಿ ಸೃಷ್ಟಿ ಪ್ರಳಯುಗಳು ಇಂದಿರೇಶನೊಳೇನಿದಚ್ಚರಿ ಅಪ್ರಮೇಯ ಸದಾ ॥ ೨೪ ॥

ಒಂದನಂತಾನಂತ ರೂಪಗಳೊಂದೆ ರೂಪದೊಳಿಹವು,
ಲೋಕಗಳೊಂದೆ ರೂಪದಿ ಸೃಷ್ಟಿ ಸ್ಥಿತಿ ಮೊದಲಾದ ವ್ಯಾಪಾರ,
ಒಂದೆ ಕಾಲದಿ ಮಾಡಿ ತಿಳಿಸದೆ ಸಂದಣಿಸಿ ಕೊಂಡಿಪ್ಪ ಜಗದೊಳು,
ನಂದನಂದನ ರಣದೊಳಿಂದ್ರಾತ್ಮಜಗೆ ತೋರಿಸನೆ ॥ ೨೫ ॥

ಶ್ರೀರಮೇಶನ ಮೂರ್ತಿಗಳು ನವನಾರಿಕುಂಜರದಂತೆ ಏಕಾಕಾರ ತೋರ್ಪವು,
ಅವಯುವಾಹ್ವಯ ಅವಯುವಗಳಲ್ಲಿ,
ಬೇರೆಬೇರ್ ಕಂಗೊಳಿಸುವ ಶರೀರದೊಳು ನಾನಾ ಪ್ರಕಾರ,
ವಿಕಾರಶೂನ್ಯ ವಿರಾಟನೆನಿಸುವ ಪದುಮಜಾಂಡದೊಳು ॥ ೨೬ ॥

ವಾರಿಜಭವಾಂಡದೊಳು ಲಕ್ಷ್ಮೀ ನಾರಸಿಂಹನ ರೂಪಗುಣಗಳು,
ವಾರಿಧಿಯೊಳಿಹ ತೆರಗಳಂದದಿ ಸಂದಣಿಸಿ ಇಹವು,
ಕಾರಣ–ಅಂಶ–ಆವೇಶ–ವ್ಯಾಪ್ತ–ಅವತಾರ–ಕಾರ್ಯ–ಅವ್ಯಕ್ತ–ವ್ಯಕ್ತವು,
ಈರೈದು ವಿಭೂತಿ ಅಂತರ್ಯಾಮಿ ರೂಪಗಳು ॥ ೨೭ ॥

ಮಣಿಗಳೊಳಗಿಹ ಸೂತ್ರದಂದದಿ ಪ್ರಣವಪಾದ್ಯನು–
ಚೇತನಾಚೇತನ ಜಗತ್ತಿನೊಳನುದಿನದಲಾಡುವನು ಸುಖಪೂರ್ಣ,
ದಣಿವಿಕೆಯು ಇವಗಿಲ್ಲ, ಬಹು ಕಾರುಣಿಕ,
ಅನಂತಾನಂತ ಜೀವರ ಗಣದೊಳೇಕಾಂಶಾಂಶ ರೂಪದಿ ನಿಂತು ನೇಮಿಸುವ ॥ ೨೮ ॥

ಜೀವ ಜೀವರ ಭೇದ, ಜಡ ಜಡ, ಜೀವ ಜಡ,
ಜಡಜೀವರಿಂದಲಿ ಶ್ರೀವರನು ಅತ್ಯಂತ ಭಿನ್ನ, ವಿಲಕ್ಷಣನು,
ಲಕ್ಷ್ಮೀ ಮೂವರಿಂದಲಿ ಪದ್ಮಜಾಂದದಿ ತಾ ವಿಲಕ್ಷಣಳೆನಿಸುತಿಪ್ಪಳು,
ಸಾವಧಿಕ ಸಮಶೂನ್ಯಳೆಂದರಿತೀರ್ವರನು ಭಜಿಸು ॥ ೨೯ ॥

ಆದಿತೇಯರು ತಿಳಿಯದಿಹ ಗುಣ ವೇದಮಾನಿಗಳೆಂದೆನಿಪ ವಾಣ್ಯಾದಿಗಳು ಬಲ್ಲರು,
ಅವರರಿಯದ ಗುಣಂಗಳನು ವೇಧ ಬಲ್ಲನು,
ಬೊಮ್ಮನರಿಯದ ಅಗಾಧಗುಣಗಳು ಲಕುಮಿ ಬಲ್ಲಳು,
ಶ್ರೀಧನೊಬ್ಬನುಪಾಸ್ಯ ಸದ್ಗುಣಪೂರ್ಣಹರಿಯೆಂದು ॥ ೩೦ ॥

ಇಂತನಂತಾನಂತ ಗುಣಗಳ ಪ್ರಾಂತಗಾಣದೆ ಮಹಲಕುಮಿ,
ಭಗವಂತಗೆ ಆಭರಣ-ಆಯುಧ-ಅಂಬರ-ಆಲಯಗಳಾಗಿ ಸ್ವಾಂತದಲಿ ನೆಲೆಗೊಳಿಸಿ,
ಪರಮ ದುರಂತಮಹಿಮನ ದೌತ್ಯಕರ್ಮ ನಿರಂತರದಿ ಮಾಡುತಲಿ,
ತದಧೀನತ್ವಯ್ಯೈದಿಹಳು ॥ ೩೧ ॥

ಪ್ರಳಯ ಜಲಧಿಯೊಳುಳ್ಳ ನಾವೆಯು ಹೊಲಬುಗಾಣದೆ ಸುತ್ತುವಂದದಿ,
ಜಲರುಹೇಕ್ಷಣನಮಲ ಗುಣರೂಪಗಳ ಚಿಂತಿಸುತ-
ನೆಲೆಯ ಗಾಣದೆ ಮಹಲಕುಮಿ ಚಂಚಲವನ್ಯೈದಿಹಳು,
ಅಲ್ಪ ಜೀವರಿಗೆ ಅಳವಡುವದೇನಿವನ ಮಹಿಮೆಗಳೀ ಜಗತ್ರಯದಿ ॥ ೩೨ ॥

ಶ್ರೀನಿಕೇತನ ಸಾತ್ವತಾಂಪತಿ, ಜ್ಞಾನಗಮ್ಯ ಗಯಾಸುರಾರ್ದನ,
ಮೌನಿಕುಲ ಸನ್ಮಾನ್ಯ, ಮಾನದ, ಮಾತುಳಧ್ವಂಸಿ,
ದೀನಜನ ಮಂದಾರ, ಮಧುರಿಪು, ಪ್ರಾಣದ,
ಜಗನ್ನಾಥ ವಿಠಲ ತಾನೆ ಗತಿಯೆಂದನುದಿನದಿ ನಂಬಿದವರ ಪೊರೆವ ॥ ೩೩ ॥

॥ ಇತಿ ಶ್ರೀ ಪಂಚತನ್ಮಾತ್ರ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

## ॥ ೮. ಶ್ರೀ ಮಾತೃಕಾ ಸಂಧಿ ॥

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ,
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥

ಪಾದಮಾನಿ ಜಯಂತನೊಳಗೆ ಸುಮೇಧನಾಮಕನಿಪ್ಪ,
ದಕ್ಷಿಣ ಪಾದದಂಗುಟದಲ್ಲಿ ಪವನನು ಭಾರಭೃದ್ರೂಪ,
ಕಾದುಕೊಂಡಿಹ ಟಂಕಿ ತರ ಮೊದಲಾದ ನಾಮದಿ,
ಸಂಧಿಗಳಲೀರೈದು ರೂಪದಲಿಪ್ಪ ಸಂತತ ನಡೆದು ನಡೆಸುತಲಿ ॥ ೧ ॥

ಕಪಿಲ ಚಾರ್ವಾಂಗಾದಿ ರೂಪದಿ ವಪುಗಳೊಳು,
ಹಸ್ತಗಳ ಸಂಧಿಯೊಳಪರಿಮಿತ ಕರ್ಮಗಳ ಮಾಡುತಲಿಪ್ಪ ದಿನದಿನದಿ,
ಕೃಪಣವತ್ಸಲ ಪಾರ್ಶ್ವದೊಳು ಪರಸುಫಲಿಯೆನಿಸುವ,
ಗುದ ಉಪಸ್ಥದಿ ವಿಪುಳ ಬಲಿ ಭಗ, ಮನವೆನಿಸಿ ತುಂದಿಯೊಳಗಿರುತಿಹನು ॥ ೨ ॥

ಐದು ಮೇಲೊಂದಧಿಕ ದಳವುಳ್ಳೈದು ಪದ್ಮವು ನಾಭಿ ಮೂಲದಿ,
ಐದು ಮೂರ್ತಿಗಳಿಹವು ಅನಿರುದ್ಧಾದಿ ನಾಮದಲಿ,
ಐದಿಸುತ ಗರ್ಭವನು ಜೀವರನಾದಿಕರ್ಮಪ್ರಕೃತಿಗುಣಗಳ ಹಾದಿ ತಪ್ಪಲುಗೊಡದೆ,
ವ್ಯಾಪಾರಗಳ ಮಾಡುತಿಹ ॥ ೩ ॥

ನಾಭಿಯಲಿ ಷಟ್ಕೋಣಮಂಡಲದೀ ಭವಿಷ್ಯದ್ ಬ್ರಹ್ಮನೊಳು,
ಮುಕ್ತಾಭ ಶ್ರೀಪ್ರದ್ಯುಮ್ನ ನಿಪ್ಪನು ವಿಬುಧಗಣಸೇವ್ಯ,
ಶೋಭಿಸುವ ಕೌಸ್ತುಭವೆ ಮೊದಲಾದಾಭರಣಾಯುಧಗಳಿಂದ,
ಮಹಾಭಯಂಕರ ಪಾಪಪುರುಷನ ಶೋಷಿಸುತ ನಿತ್ಯ ॥ ೪ ॥

ದ್ವಾದಶಾರ್ಕರ ಮಂಡಲವು ಮಧ್ಯೋದರದೊಳು ಸುಷುಮ್ನದೊಳಗಿಹದು–
ಐದು ರೂಪಾತ್ಮಕನು ಅರವತ್ತಧಿಕ ಮುನ್ನೂರು–
ಈ ದಿವಾರಾತ್ರಿಗಳ ಮಾನಿಗಳಾದ ದಿವಿಜರ ಸಂತಯಿಸುತ,
ನಿಷಾದ ರೂಪಕ ದೈತ್ಯರನು ಸಂಹರಿಪ ನಿತ್ಯದಲಿ ॥ ೫ ॥

ಹೃದಯದೊಳಗಿಹದಷ್ಟದಳ ಕಮಲದರೊಳಗೆ–
ಪ್ರಾದೇಶನಾಮಕ ನುದಿತ ಭಾಸ್ಕರನಂತೆ ತೋರ್ಪನು ಬಿಂಬನೆಂದೆನಿಸಿ,
ಪದುಮ ಚಕ್ರ ಸುಶಂಖ ಸುಗದಾಂಗದ ಕಟಕ ಮಕುಟಾಂಗುಳೀಯಕ–
ಪದಕ ಕೌಸ್ತುಭಹಾರ ಗ್ರೈವೇಯಾದಿ ಭೂಷಿತನು ॥ ೬ ॥

ದ್ವಿದಳ ಪದ್ಮವು ಶೋಭಿಪುದು ಕಂಠದಲಿ,
ಮುಖ್ಯಪ್ರಾಣ ತನ್ನಯ ಸುದತಿಯಿಂದೊಡಗೂಡಿ ಹಂಸೋಪಾಸನೆಯ ಮಾಳ್ಪ,
ಉದಕವನ್ನಾದಿಗಳಿಗವಕಾಶದನು ತಾನಾಗಿದ್ದು,
ಉದಾನಾಭಿಧನು ಶಬ್ದವ ನುಡಿದು ನುಡಿಸುವ ಸರ್ವಜೀವರೊಳು ॥ ೭ ॥

ನಾಸಿಕದಿ ನಾಸತ್ಯದಸ್ರರು ಶ್ವಾಸಮಾನೀ ಪ್ರಾಣಭಾರತಿ–
ಹಂಸ ಧನ್ವಂತ್ರಿಗಳು ಅಲ್ಲಲ್ಲಿಪ್ಪರವರೊಳಗೆ,
ಭೇಶ ಭಾಸ್ಕರರು ಅಕ್ಷಿಯುಗಳಕಧೀಶರೆನಿಪರು,
ಅವರೊಳಗೆ ಲಕ್ಷ್ಮೀಶದಧಿವಾಮನರು ನೀಯಾಮಿಸುತಲಿರುತಿಹರು ॥ ೮ ॥

ಸ್ತಂಭರೂಪದಲಿಪ್ಪ ದಕ್ಷಿಣ ಅಂಬಕದಿ ಪ್ರದ್ಯುಮ್ನ,
ಗುಣರೂಪಂಭ್ರಣಿಯು ತಾನಾಗಿ ಇಪ್ಪಳು,
ವತ್ಸರೂಪದಲಿ ಪೊಂಬಸಿರ ಪದಯೋಗ್ಯ ಪವನ,
ತ್ರಿಯಂಬಕಾದಿ ಸಮಸ್ತ ದಿವಿಜ ಕದಂಬಸೇವಿತನಾಗಿ ಸರ್ವ ಪದಾರ್ಥಗಳ ತೋರ್ಪ ॥ ೯ ॥

ನೇತ್ರಗಳಲಿ ವಸಿಷ್ಠ-ವಿಶ್ವಾಮಿತ್ರ-ಭಾರದ್ವಾಜ-ಗೌತಮ-ಅತ್ರಿ-
ಆ ಜಮದಗ್ನಿ ನಾಮಗಳಿಂದ ಕರೆಸುತಲಿ,
ಪತ್ರತಾಪಕ ಶಕ್ರ ಸೂರ್ಯ ಧರಿತ್ರಿ ಪರ್ಜನ್ಯಾದಿ ಸುರರು,
ಜಗತ್ರಯೇಶನ ಭಜಿಪರನುದಿನ ಪರಮ ಭಕುತಿಯಲಿ ॥ ೧೦ ॥

ಜ್ಯೋತಿಯೊಳಗಿಪ್ಪನು ಕಪಿಲ ಪುರುಹೂತಮುಖ ದಿಕ್ಪತಿಗಳಿಂದ ಸಮೇತನಾಗಿ,
ದಕ್ಷಿಣಾಕ್ಷಿಯ ಮುಖದೊಳಿಹ ವಿಶ್ವ ಶ್ವೇತವರ್ಣ ಚತುರ್ಭುಜನು,
ಸಂಪ್ರೀತಿಯಿಂದಲಿ ಸ್ಥೂಲ ವಿಷಯವ ಚೇತನರಿಗುಂಡುಣಿಪ-
ಜಾಗ್ರತೆಯಿತ್ತು ನೃಗಜಾಸ್ಯ ॥ ೧೧ ॥

ನೆಲೆಸಿಹರು ದಿಗ್ದೇವತೆಗಳಿಕ್ಕೆಲದಿ ಕರ್ಣಂಗಳಲಿ,
ತೀರ್ಥಂಗಳಿಗೆ ಮಾನಿಗಳಾದ ಸುರನದಿ ಮುಖ್ಯ ನಿರ್ಜರರು-
ಬಲದ ಕಿವಿಯಲಿ ಇರುತಿಹರು, ಬಾಂಬೊಳೆಯ ಜನಕ ತ್ರಿವಿಕ್ರಮನು-
ನಿರ್ಮಲಿನರನು ಮಾಡುವನು ಈಪರಿ ಚಿಂತಿಸುವ ಜನರ ॥ ೧೨ ॥

ಚಿತ್ತಜೇಂದ್ರರು ಮನದೊಳಿಪ್ಪರು, ಕೃತ್ತಿವಾಸನು ಅಹಂಕಾರದಿ,
ಚಿತ್ತಚೇತನಮಾನಿಗಳು ವಿಹಗೇಂದ್ರ ಫಣಿಪರೊಳು ನಿತ್ಯದಲಿ ನೆಲೆಗೊಂಡು,
ಹತ್ತೊಂಭತ್ತುಮೊಗ ತೈಜಸನು ಸ್ವಪ್ನಾವಸ್ಥೆಯೈದಿಸಿ,
ಜೀವರನು ಪ್ರವಿವಿಕ್ತ ಭುಕುವೆನಿಪ ॥ ೧೩ ॥

ಜ್ಞಾನಮಯ ತೈಜಸನು ಹೃದಯಸ್ಥಾನವೈದಿಸಿ-
ಪ್ರಾಜ್ಞನೆಂಬಭಿಧಾನದಿಂ ಕರೆಸುತ್ತ ಚಿತ್ಸುಖವ್ಯಕ್ತಿಯನೆ ಕೊಡುತ,
ಆನತೆಷ್ಟಪ್ರದನು ಅನುಸಂಧಾನವೀಯದೆ ಸುಪ್ತಿಯೈದಿಸಿ,
ತಾನೆ ಪುನರಪಿ ಸ್ವಪ್ನ ಜಾಗ್ರತೆಯೀವ ಚೇತನಕೆ ॥ ೧೪ ॥

ನಾಲಿಗೆಯೊಳಿಹ ವರುಣ ಮತ್ಸ್ಯ, ಅಣುನಾಲಿಗೆಯೊಳು ಉಪೇಂದ್ರಇಂದ್ರರು,
ತಾಲು ಪರ್ಜನ್ಯಾಖ್ಯ ಸೂರ್ಯನು ಅರ್ಧಗರ್ಭನಿಹ,
ಆಲೆಯೊಳು ವಾಮನ ಸುಭಾಮನ, ಫಾಲದೊಳು ಶಿವಕೇಶವನು,
ಸುಕಪೋಲದೊಳಗೆ ರತೀಶಕಾಮನು ಅಲ್ಲಿ ಪ್ರದ್ಯುಮ್ನ ॥ ೧೫ ॥

ರೋಮಗಳಲಿ ವಸಂತ ತ್ರಿಕಕುದ್ಧಾಮ,
ಮುಖದೊಳಗಗ್ನಿ ಭಾರ್ಗವ, ತಾಮರಸಭವ ವಾಸುದೇವರು ಮಸ್ತಕದೊಳಿಹರು,
ಈ ಮನದೊಳಿಹ ವಿಷ್ಣು, ಶಿಖದೊಳುಮಾಮಹೇಶ್ವರ ನಾರಸಿಂಹ ಸ್ವಾಮಿ-
ತನ್ನನುದಿನದಿ ನೆನೆವರಪಮೃತ್ಯು ಪರಿಹರಿಪ ॥ ೧೬ ॥

ಮೌಳಿಯಲ್ಲಿಹ ವಾಸುದೇವನು ಏಳಧಿಕನವಜಾತಿ ರೂಪವ ತಾಳಿ–
ಮುಖದೊಳು ಶ್ರವಣನಯನಾದ್ಯವಯವಗಳಿಗೆ ಆಳರಸು ತಾನಾಗಿ,
ಸತತ ಸುಲೀಲೆಗೈಯುತಲಿಪ್ಪ ಸುಖಮಯ,
ಕೇಳಿ ಕೇಳಿಸಿ ನೋಡಿ ನೋಡಿಸಿ ನುಡಿದು ನುಡಿಸುವನು ॥ ೧೭ ॥

ಎರಡಧಿಕವೆಪ್ಪತ್ತೆನಿಪ ಸಾವಿರದ ನಾಡಿಗೆ ಮುಖ್ಯವು ಏಕೋತ್ತರ ಶತಗಳು,
ಅಲ್ಲಿಹವು ನೂರಾ ಒಂದು ಮೂರ್ತಿಗಳು,
ಅರಿದು ದೇಹದಿ ಕಲಶನಾಮಕ ಹರಿಗೆ ಕಳೆಗಳಿವೆಂದು–
ನೈರಂತರದಿ ಪೂಜಿಸುತಿಹರು ಪರಮಾದರದಿ ಭೂಸುರರು ॥ ೧೮ ॥

ಇದಕೆ ಕಾರಣವೆನಿಸುವವು ಎರಡಧಿಕ ದಶ ನಾಡಿಗಳೊಳಗೆ,
ಸುರನದಿಯೆ ಮೊದಲಾದಮಲ ತೀರ್ಥಗಳಿಹವು ಕರಣದಲಿ,
ಪದುಮನಾಭನು ಕೇಶವಾದಿ ದ್ವಿದಶರೂಪದಲಿಪ್ಪನಲ್ಲಿ,
ಅತಿಮೃದುಳವಾದ ಸುಷುಮ್ನದೊಳಗೇಕಾತ್ಮನೆನಿಸುವನು ॥ ೧೯ ॥

ಆಮ್ನಯಪ್ರತಿಪಾದ್ಯ ಶ್ರೀಪ್ರದ್ಯುಮ್ನ ದೇವನು ದೇಹದೊಳಗೆ–
ಸುಷುಮ್ನದೀಡಾಪಿಂಗಳದಿ ವಿಶ್ವಾದಿ ರೂಪದಲಿ,
ನಿರ್ಮಲಾತ್ಮನು ವಾಣಿ ವಾಯು ಚತುರ್ಮುಖರೊಳಿದ್ದು,
ಅಖಿಳ ಜೀವರ ಕರ್ಮಗುಣವನುಸರಿಸಿ ನಡೆವನು ವಿಶ್ವವ್ಯಾಪಕನು ॥ ೨೦ ॥

ಅಬ್ದಯನ ಋತು ಮಾಸ ಪಕ್ಷ ಸುಶಬ್ದದಿಂದಲಿ ಕರೆಸುತಲಿ,
ನೀಲಾಬ್ದವರ್ಣನಿರುದ್ಧನೇ ಮೊದಲಾದ್ಯೆದು ರೂಪದಲಿ ಹಬ್ಬಿಹನು ಸರ್ವತ್ರದಲಿ,
ಕರುಣಾಬ್ಧಿ ನಾಲ್ವತ್ತೈದು ರೂಪದಿ,
ಲಭ್ಯನಾಗುವನೀ ಪರಿ ಧೇನಿಸುವ ಭಕುತರಿಗೆ ॥ ೨೧ ॥

ಐದು ರೂಪಾತ್ಮಕನು ಇಪ್ಪತ್ತೈದು ರೂಪದಲಿಪ್ಪ,
ಮತ್ತ್ಹದಿನೈದು ತಿಥಿ, ಯಿಪ್ಪತ್ತುನಾಲಕರಿಂದ ಪೆಚ್ಚಿಸಲು–
ಐದುವದು ಅರವತ್ತಧಿಕ ಆರ್ನೆದು ದಿವಸ,
ಆಹ್ವಯನೊಳಗೆ ಮನತೋಯ್ದುವಗೆ ತಾಪತ್ರಯದ ಮಹದೋಷವೆಲ್ಲಿಹದೋ ॥ ೨೨ ॥

ದಿವಸ ಯಾಮ ಮೂಹೂರ್ತ ಘಟಿಕಾದ್ಯವಯವಗಳೊಳಗಿದ್ದು,
ಗಂಗಾಪ್ರವಹದಂದದಿ ಕಾಲನಾಮಕ ಪ್ರವಹಿಸುತಲಿಪ್ಪ,
ಇವನ ಗುಣರೂಪ ಕ್ರಿಯಂಗಳ ನಿವಹದೊಳು ಮುಳುಗಾಡುತಲಿ ಭಾರ್ಗವಿ–
ಸದಾನಂದಾತ್ಮಳಾಗಿಹಳೆಲ್ಲಕಾಲದಲಿ ॥ ೨೩ ॥

ವೇದತತಿಗಳ ಮಾನಿ ಲಕ್ಷ್ಮೀ, ಧರಾಧರನ ಗುಣರೂಪಕ್ರಿಯೆಗಳ–
ಆದಿಮಧ್ಯಾಂತವನು ಕಾಣದೆ ಮನದಿಯೋಚಿಸುತ ಆದಪೆನೆ ಈತನಿಗೆ ಪತ್ನಿ?,
ಕೃಪೋದಧಿಯು ಸ್ವೀಕರಿಸಿದನು,
ಲೋಕಾಧಿಪನು ಭಿಕ್ಷುಕನ ಮನೆಯೌತನವ ಕೊಂಬಂತೆ ॥ ೨೪ ॥

ಕೋವಿದರು ಚಿತ್ತೈಸುವದು ಶ್ರೀದೇವಿಯೊಳಗಿಹ ನಿಖಿಲಗುಣ
ತೃಣ ಜೀವರಲಿ ಕಲ್ಪಿಸಿ ಯುಕುತಿಯಲಿ ಮತ್ತು ಕ್ರಮದಿಂದ,
ದೇವದೇವಕಿಯಿಪ್ಪಳೆಂದರಿದಾ ವಿರಿಂಚನ ಜನನಿ,
ಯೀತನ ಆವಕಾಲಕು ಅರಿಯಳಂತವ ನರರ ಪಾಡೇನು ॥ ೨೫ ॥

ಕ್ಷೀರ ದಧಿ ನವನೀತ ಘೃತದೊಳು ಸೌರಭರಸಾಹ್ವಯನೆನಿಸಿ–
ಶಾಂತೀರಮಣ ಜ್ಞಾನೇಚ್ಛಾಕ್ರಿಯಾಶಕ್ತಿಯೆಂದೆಂಬ ಈರೆರಡು ನಾಮದಲಿ ಕರೆಸುತ,
ಭಾರತೀ ವಾಗ್ದೇವಿ ವಾಯು ಸರೋರುಹಾಸನರಲ್ಲಿ,
ನೆಲೆಸಿಹರೆಲ್ಲ ಕಾಲದಲಿ ॥ ೨೬ ॥

ವಸುಗಳೆಂಟು, ನವಪ್ರಜೇಶರು, ಶ್ವಸನಗಣವೈವತ್ತು,
ಏಕಾದಶ ದಿವಾಕರರು, ಅನಿತೆ ರುದ್ರರು, ಅಶ್ವಿನಿಗಳೆರಡು,
ದಶವಿಹೀನ ಶತಾಖ್ಯ ಈ ಸುಮನಸರೊಳಗೆ,
ಚತುರಾತ್ಮನೀಯಾಮಿಸುವ ಬ್ರಹ್ಮಸಮೀರಖಗಫಣೀಂದ್ರರೊಳಗಿದ್ದು ॥ ೨೭ ॥

ತೋರುತಿಪ್ಪನು ಚಕ್ರದಲಿ ಹಿಂಕಾರನಾಮಕ, ಶಂಖದಲಿ ಪ್ರತಿಹಾರ,
ಗದೆಯಲಿ ನಿಧನ, ಪದ್ಮದಲಿಪ್ಪ ಪ್ರಸ್ತಾನ,
ಕಾರುಣಿಕನುದ್ಗೀಥ ನಾಮದಿ ಮಾರಮಣನೈರೂಪಗಳ,
ಶಂಖಾರಿ ಮೊದಲಾದಾಯುಧಗಳೊಳು ಸ್ಮರಿಸಿ ಧರಿಸುತಿರು ॥ ೨೮ ॥

ತನುವೆ ರಥ, ವಾಗಾಭಿಮಾನಿಯೆ ಗುಣವೆನಿಸುವಳು,
ಶ್ರೋತ್ರದೊಳು ರೋಹಿಣಿ ಶಶಾಂಕರು ಪಾಶಪಾಣಿಗಳು,
ಅಶ್ವವೆಂದೆನಿಸಿ ಇನನು ಸಂಜ್ಞಾ ದೇವಿಯರು, ಇಹರನಲಲೋಚನ,
ಸೂತನೆನಿಸುವ ಪ್ರಣವ ಪಾದ್ಯ ಪ್ರಾಣನಾಮಕ ರಥಿಕನೆನಿಸುವನು ॥ ೨೯ ॥

ಅಮಿತಮಹಿಮನಪಾರಗುಣಗಳ ಸಮಿತವರ್ಣಾತ್ಮಕ ಶ್ರುತಿ ಸ್ಮೃತಿ ಗಮಿಸಲಾಪವೆ?
ತದಭಿಮಾನಿಗಳೆಂದೆನಿಸಿಕೊಂಬ ಕಮಲ ಸಂಭವ ಭವ ಸುರೇಂದ್ರಾದ್ಯಮರರು–
ಅನುದಿನ ತಿಳಿಯಲರಿಯರು,
ಸ್ವಮಹಿಮೆಗಳ ಆದ್ಯಂತಮಧ್ಯಗಳರಿವ ಸರ್ವಜ್ಞ ॥ ೩೦ ॥

ವಿತ್ತದೇಹಾಗಾರ ದಾರಾಪತ್ಯ ಮಿತ್ರಾದಿಗಳೊಳಗೆ,
ಹರಿ ಪ್ರತ್ಯಗಾತ್ಮನು ಎಂದೆನಿಸಿ ನೆಲೆಸಿಪ್ಪನೆಂದರಿದು,
ನಿತ್ಯದಲಿ ಸಂತೃಪ್ತಿ ಬಡಿಸುತ ಉತ್ತಮಾಧಮಮಧ್ಯಮರ,
ಕೃತ ಕೃತ್ಯನಾಗುನ್ಮತ್ತನಾಗದೆ ಭೃತ್ಯನಾನೆಂದು ॥ ೩೧ ॥

ದೇವದೇವೇಶನ ಸುಮೂರ್ತಿ ಕಳೇವರಗಳೊಳಗನವರತ-
ಸಂಭಾವಿಸುತ-ಪೂಜಿಸುತ-ನೋಡುತ ಸುಖಿಸುತಿರು ಬಿಡದೆ,
ಶ್ರೀವರ ಜಗನ್ನಾಥ ವಿಠಲ ತಾ ಒಲಿದು ಕಾರುಣ್ಯದಲಿ
ಭವ ನೋವ ಪರಿಹರಿಸುವನು, ಪ್ರವಿತತ ಪತಿತ ಪಾವನನು ॥ ೩೨ ॥

॥ ಇತಿ ಶ್ರೀ ಮಾತೃಕಾ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

## ॥ ೬. ಶ್ರೀ ವರ್ಣಪ್ರಕ್ರಿಯ ಸಂಧಿ ॥
## ॥ ೬. ಶ್ರೀ ಉದಾತ್ತ ಅನುದಾತ್ತ ಸಂಧಿ ॥

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ,
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥

ಹರಿಯೆ ಪಂಚಾಶದ್ವರ್ಣ, ಸುಸ್ವರವುದಾತ್ತಾನುದಾತ್ತ ಪ್ರಚಯ ಸ್ವರಿತ ಸಂಧಿ-
ವಿಸರ್ಗ ಬಿಂದುಗಳೊಳಗೆ ತದ್ವಾಚ್ಯ ಇರುವ,
ತನ್ನಾಮರೂಪಗಳರಿತುಪಾಸನೆ ಗೈವರಿಳೆಯೊಳು ಸುರರೆ ಸರಿ, ನರರಲ್ಲ,
ಅವರಾಡುವುದೆ ವೇದಾರ್ಥ ॥ ೧ ॥

ಈಶನಲಿ ವಿಜ್ಞಾನ, ಭಗವದ್ದಾಸರಲಿ ಸದ್ಭಕ್ತಿ, ವಿಷಯನಿರಾಶೆ,
ಮಿಥ್ಯಾವಾದದಲಿ ಪ್ರದ್ವೇಷ,
ನಿತ್ಯದಲಿ ಈ ಸಮಸ್ತ ಪ್ರಾಣಿಗಳಲಿ ರಮೇಶನಿಹನೆಂದರಿದು,
ಅವರಭಿಲಾಷೆಗಳ ಪೂರಯಿಸುವುದೆ ಮಹಯಜ್ಞ ಹರಿಪೂಜೆ ॥ ೨ ॥

ತ್ರಿದಶ ಏಕಾತ್ಮಕನೆನಿಸಿ ಭೂಉದಕ ಶಿಖಿಯೊಳು ಹತ್ತು ಕರಣದಿ-
ಅಧಿಪರೆನಿಸುವ ಪ್ರಾಣಮುಖ್ಯಾದಿತ್ಯರೊಳು ನೆಲೆಸಿ,
ವಿದಿತನಾಗಿದ್ದನವರತ ನಿರವಧಿಕಮಹಿಮನು ಸಕಲ ವಿಷಯವ-
ನಿಧನನಾಮಕ ಸಂಕರುಷಣಾಹ್ವಯನು ಸ್ವೀಕರಿಪ ॥ ೩ ॥

ದೈಹಿಕ ದೈಶಿಕ ಕಾಲಿಕತ್ರಯ ಗಹನ ಕರ್ಮಗಳುಂಟು,
ಇದರೊಳು ವಿಹಿತ ಕರ್ಮಗಳರಿತು ನಿಷ್ಕಾಮಕನು ನೀನಾಗಿ,
ಬೃಹತಿನಾಮಕ ಭಾರತೀಶನ ಮಹಿತರೂಪವ ನೆನೆದು ಮನದಲಿ,
ಅಹರಹರ್ಭಗವಂತಗರ್ಪಿಸು ಪರಮ ಭಕುತಿಯಲಿ ॥ ೪ ॥

ಮೂರು ವಿಧ ಕರ್ಮಗಳೊಳಗೆ ಕಂಸಾರಿ ಭಾರ್ಗವ ಹಯವದನ,
ಸಂಪ್ರೇರಕನು ತಾನಾಗಿ ನವರೂಪಂಗಳನು ಧರಿಸಿ,
ಸೂರಿ ಮಾನವ ದಾನವರೊಳು ವಿಕಾರಶೂನ್ಯನು ಮಾಡಿ ಮಾಡಿಸಿ,
ಸಾರಭೋಕ್ತನು ಸ್ವೀಕರಿಸಿ ಕೊಡುತಿಪ್ಪ ಜೀವರಿಗೆ ॥ ೫ ॥

ಅನಳ ಪಕ್ವವ ಗೈಸಿದನ್ನವ ಅನಳನೊಳು ಹೋಮಿಸುವ ತೆರದಂತನಿಮಿಷೇಶನು–
ಮಾಡಿ ಮಾಡಿಸಿದಖಿಳ ಕರ್ಮಗಳ ಮನವಚನ ಕಾಯದಲಿ ತಿಳಿದು,
ಅನುದಿನದಿ ಕೊಡು ಶಂಕಿಸದೆ,
ವೃಜಿನಾರ್ದನ ಸದಾ ಕೈಕೊಂಡು ಸಂತಯಿಸುವನು ತನ್ನವರ ॥ ೬ ॥

ಕುದುರೆ ಬಾಲದ ಕೊನೆಯ ಕೂದಲು ತುದಿ ವಿಭಾಗವ ಮಾಡಿ–
ಶತವಿಧವದರೊಳೊಂದನು ನೂರು ಭಾಗವ ಮಾಡಲೆಂತಿಹುದೊ,
ವಿಧಿ ಭವಾದಿ ಸಮಸ್ತ ದಿವಿಜರ ಮೊದಲು ಮಾಡಿ–
ತೃಣಾಂತ ಜೀವರೊಳಧಿಕ ನ್ಯೂನತೆ ಯಿಲ್ಲ ವೆಂದಿಗು ಜೀವ ಪರಮಾಣು ॥ ೭ ॥

ಜೀವನಂಗುಷ್ಠಾಗ್ರಮೂರುತಿ, ಜೀವನಂಗುಟಮಾತ್ರ ಮೂರುತಿ,
ಜೀವನ ಪ್ರಾದೇಶ, ಜೀವಾಕಾರ ಮೂರ್ತಿಗಳು,
ಏವಮಾದಿ ಅನಂತ ರೂಪದಿ ಯಾವದವಯವಗಳೊಳು ವ್ಯಾಪಿಸಿ ಕಾವ–
ಕರುಣಾಳುಗಳ ದೇವನು ಈ ಜಗತ್ರಯವ ॥ ೮ ॥

ಬಿಂಬ ಜೀವಾಂಗುಷ್ಠಮಾತ್ರದಿ ಇಂಬುಗೊಂಡಿಹ ಸರ್ವರೊಳು,
ಸೂಕ್ಷ್ಮಾಂಬರದಿ ಹೃತ್ಕಮಲಮಧ್ಯ ನಿವಾಸಿಯೆಂದೆನಿಸಿ,
ಎಂಬರೀತಗೆ ಕೋವಿದರು ವಿಶ್ವಂಭರಾತ್ಮಕ–ಪ್ರಾಜ್ಞ,
ಭಕ್ತ ಕುಟುಂಬಿ ಸಂತೈಸುವನು ಈ ಪರಿ ಬಲ್ಲ ಭಜಕರನು ॥ ೯ ॥

ಪುರುಷ ನಾಮಕ ಸರ್ವಜೀವರೊಳಿರುವ ದೇಹಾಕಾರ ರೂಪದಿ,
ಕರಣ ನಿಯಾಮಕ ಹೃಷೀಕಪನಿಂದ್ರಿಯಂಗಳಲಿ,
ತುರಿಯ ನಾಮಕ ವಿಶ್ವ, ತಾ ಹನ್ನೆರಡು ಬೆರಳುಳಿದುತ್ತಮಾಂಗದಿ,
ಎರಡಧಿಕ ಎಪ್ಪತ್ತು ಸಾವಿರ ನಾಡಿಯೊಳಗಿಪ್ಪ ॥ ೧೦ ॥

ವ್ಯಾಪಕನು ತಾನಾಗಿ ಜೀವ ಸ್ವರೂಪ ದೇಹದ ಒಳಹೊರಗೆ ನಿರ್ಲೇಪನಾಗಿಹ-
ಜೀವಕೃತ ಕರ್ಮಗಳನಾಚರಿಸಿ,
ಶ್ರೀ ಪಯೋಜಭವೇರರಿಂದ ಪ್ರದೀಪವರ್ಣ ಸ್ವಮೂರ್ತಿ ಮಧ್ಯಗ ತಾ ಪೊಳೆವ,
ವಿಶ್ವಾದಿರೂಪದಿ ಸೇವೆ ಕೈಕೊಳುತ ॥ ೧೧ ॥

ಗರುಡ ಶೇಷ ಭವಾದಿ ನಾಮವ ಧರಿಸಿ ಪವನ,
ಸ್ವರೂಪದೇಹದಿ ಕರಣನಿಯಾಮಕನು ತಾನಾಗಿಪ್ಪ ಹರಿಯಂತೆ,
ಸರಸಿಜಾಸನ ವಾಣಿ ಭಾರತಿ ಭರತನಿಂದೊಡಗೂಡಿ ಲಿಂಗದಿ ಇರುತಿಹನು,
ಮಿಕ್ಕಾದಿತೇಯರಿಗಿಲ್ಲವಾಸ್ಥಾನ ॥ ೧೨ ॥

ಜೀವನಕೆ ತುಷದಂತೆ ಲಿಂಗವು ಸಾವಕಾಶದಿ ಪೊಂದಿ ಸುತ್ತಲು,
ಪ್ರಾವರಣ ರೂಪದಲಿ ಇಪ್ಪುದು ಭಗವದಿಚ್ಛೆಯಲಿ,
ಕೇವಲ ಜಡಪ್ರಕೃತಿಯು ಇದಕಧಿದೇವತೆಯು ಮಹಲಕುಮಿ ಯೆನಿಪಳು,
ಆ ವಿರಜೆಯ ಸ್ನಾನ ಪರಿಯಂತರದಿ ಹತ್ತಿಹುದು ॥ ೧೩ ॥

ಆರಧಿಕ ದಶಕಳೆಗಳುಳ್ಳ ಶರೀರವು ಅನಿರುದ್ಧಗಳ ಮಧ್ಯದಿ ಸೇರಿ ಇಪ್ಪದು-
ಜೀವ ಪರಮಾಚ್ಛಾದಿಕದ್ವಯವು,
ಬಾರದಂದದಿ ದಾನವರನತಿದೂರಗೈಸುತ ಶ್ರೀಜನಾರ್ದನ,
ಮೂರುಗುಣದೊಳಗಿಪ್ಪನೆಂದಿಗು ತ್ರಿವೃತುಯೆಂದೆನಿಸಿ ॥೧೪ ॥

ರುದ್ರ ಮೊದಲಾದಮರರಿಗೆ ಅನಿರುದ್ಧದೇಹವೆ ಮನೆಯೆನಿಸುವುದು,
ಇದ್ದು ಕೆಲಸವ ಮಾಡರು ಅಲ್ಲಿಂದಿತ್ತ ಸ್ಥೂಲದಲಿ,
ಕ್ರುದ್ಧಖಿಲ ದಿವಿಜರು ಪರಸ್ಪರಸ್ಪರ್ಧೆಯಿಂದಲಿ ದ್ವಂದ್ವಕರ್ಮ-
ಸಮೃದ್ಧಿಗಳನಾಚರಿಸುವರು ಪ್ರಾಣೇಶನಾಜ್ಞೆಯಲಿ ॥ ೧೫ ॥

ಮಹಿಯೊಳಗೆ ಸುಕ್ಷೇತ್ರ ತೀರ್ಥದಿ ತುಹಿನ ವರುಷ ವಸಂತಕಾಲದಿ,
ದಹಿಕ ದೈಶಿಕ ಕಾಲಿಕತ್ರಯ ಧರ್ಮಕರ್ಮಗಳ,
ದ್ರುಹಿಣ ಮೊದಲಾದಮರರೆಲ್ಲರು ವಹಿಸಿ ಗುಣಗಳನನುಸರಿಸಿ,
ಸನ್ನಿಹಿತರಾಗಿದ್ದೆಲ್ಲರೊಳು ಮಾಡುವರು ವ್ಯಾಪಾರ ॥ ೧೬ ॥

ಕೇಶ ಸಾಸಿರವಿಧ ವಿಭಾಗವ ಗೈಸಲು ಎನತ-ನಿತಿಹ ಸುಷುಮ್ನವು-
ಆ ಶಿರಾಂತದಿ ವ್ಯಾಪಿಸಿಹದೀ ದೇಹಮಧ್ಯದಲಿ,
ಆ ಸುಷುಮ್ನಕೆ ವಜ್ರಿಕ-ಆರ್ಯ-ಪ್ರಕಾಶಿನೀ-ವೈದ್ಯುತಿಗಳಿಹವು
ಪ್ರದೇಶದಲಿ ಪಶ್ಚಿಮಕೆ ಉತ್ತರ ಪೂರ್ವ ದಕ್ಷಿಣಕೆ ॥ ೧೭ ॥

ಆ ನಳಿನಭವ ನಾಡಿಯೊಳಗೆ ತ್ರಿಕೋಣ ಚಕ್ರವು ಇಪ್ಪದು,
ಅಲ್ಲಿ ಕೃಶಾನುಮಂಡಲಮಧ್ಯಗನು ಸಂಕರುಷಣಾಹ್ವಯನು,
ಹೀನ ಪಾಪಾತ್ಮಕ ಪುರುಷನ ದಹಾನಗೈಸುತ ದಿನದಿನದಿ–
ವಿಜ್ಞಾನಮಯ ಶ್ರೀವಾಸುದೇವನ ಐದಿಸುವ ಕರುಣಿ ॥ ೧೮ ॥

ಮಧ್ಯನಾಡಿಯ ಮಧ್ಯದಲಿ, ಹೃತ್ಪದ್ಮಮೂಲದಿ ಮೂಲಪತಿ ಪದಪದ್ಮಮೂಲದಲಿ–
ಇಪ್ಪ ಪವನನ ಪಾದಮೂಲದಲಿ–
ಹೊಂದಿಕೊಂಡಿಹ ಜೀವಲಿಂಗನಿರುದ್ಧ ದೇಹವಿಶಿಷ್ಟನಾಗಿ,
ಕಪರ್ದಿ ಮೊದಲಾದಮರರೆಲ್ಲರು ಕಾದುಕೊಂಡಿಹರು ॥ ೧೯ ॥

ನಾಳಮಧ್ಯದಲಿಪ್ಪ ಹೃತ್ಕೀಲಾಲಜದೊಳಿಪ್ಪಷ್ಟದಳದಿ–
ಕುಲಾಲಚಕ್ರದ ತೆರದಿ ಚರಿಸುತ ಹಂಸನಾಮಕನು,
ಕಾಲಕಾಲಗಳಲ್ಲಿ ಯೆಣ್ದೆಸೆ ಪಾಲಕರ ಕೈಸೇವೆಗೊಳುತ ಕೃಪಾಳು,
ಅವರಭಿಲಾಷೆಗಳ ಪೂರೈಸಿ ಕೊಡುತಿಪ್ಪ ॥ ೨೦ ॥

ವಾಸವಾನುಜ ರೇಣುಕಾತ್ಮಜ ದಾಶರಥಿ ವೃಜಿನಾರ್ದನಮಲಜಲಾಶಯಾಲಯ–
ಹಯವದನ ಶ್ರೀಕಪಿಲ ನರಸಿಂಹ,
ಈ ಸುರೂಪದಿ ಅವರವರ ಸಂತೋಷ ಬಡಿಸುತ ನಿತ್ಯಸುಖಮಯ,
ವಾಸವಾಗಿಹ ಹೃತ್ಕಮಲದೊಳು ಬಿಂಬನೆಂದೆನಿಸಿ ॥ ೨೧ ॥

ಸುರಪನಾಲಯಕ್ಕೈದಿದರೆ ಮನವೆರಗುವುದು ಸತ್ಪುಣ್ಯಮಾರ್ಗದಿ,
ಬರಲು ವಹ್ನಿಯ ಮನೆಗೆ ನಿದ್ರಾಲಸ್ಯಹಸಿತೃಷೆಯು,
ತರಣಿತನಯನಿಕೇತನದಿ ಸಂಭರಿತ ಕೋಪಾಟೋಪ ತೋರುವುದು,
ಅರವಿದೂರನು ನಿರ್‍ಋತಿಯಲಿರೆ ಪಾಪಗಳ ಮಾಳ್ಪ ॥ ೨೨ ॥

ವರುಣನಲ್ಲಿ ವಿನೋದ ಹಾಸ್ಯವು, ಮರುತನೊಳು ಗಮನಾಗಮನ,
ಹಿಮಕರ ಧನಾಧಿಪರಲ್ಲಿ ಧರ್ಮದ ಬುದ್ಧಿ ಜನಿಸುವದು,
ಹರನ ಮಂದಿರದಲ್ಲಿ ಗೋ ಧನ ಧರಣಿ ಕನ್ಯಾದಾನಗಳು–
ಒಂದರಫಳಿಗೆ ತಡೆಯದಲೆ ಕೊಡುತಿಹ ಚಿತ್ತ ಪುಟ್ಟುವುದು ॥ ೨೩ ॥

ಹೃದಯದೊಳಗೆ ವಿರಕ್ತಿ, ಕೇಸರಕೊದಗೆ ಸ್ವಪ್ನ, ಸುಷುಪ್ತಿ ಲಿಂಗದಿ,
ಮಧುಹ ಕರ್ಣಿಕೆಯಲ್ಲಿ ಬರೆ ಜಾಗ್ರತೆಯು ಪುಟ್ಟುವುದು,
ಸುದರುಶನ ಮೊದಲಾದ ಅಷ್ಟಾ ಯುಧವ ಪಿಡಿದು–
ದಿಶಾಧಿಪತಿಗಳ ಸದನದಲಿ ಸಂಚರಿಸುತೀಪರಿ ಬುದ್ಧಿಗಳ ಕೊಡುವ ॥ ೨೪ ॥

ಸೂತ್ರನಾಮಕ ಪ್ರಾಣಪತಿ ಗಾಯತ್ರಿ ಸಂಪ್ರತಿಪಾದ್ಯನಾಗೀ ಗಾತ್ರದೊಳು ನೆಲೆಸಿರಲು,
ತಿಳಿಯದೆ ಕಂಡಕಂಡಲ್ಲಿ ಧಾತ್ರಿಯೊಳು ಸಂಚರಿಸಿ–
ಪುತ್ರ ಕಳತ್ರ ಸಹಿತನುದಿನದಿ,
ತೀರ್ಥ ಕ್ಷೇತ್ರ ಯಾತ್ರೆಯ ಮಾಡಿದೆವು ಎಂದೆನುತ ಹಿಗ್ಗುವರು ॥ ೨೫ ॥

ನಾರಸಿಂಹ ಸ್ವರೂಪದೊಳಗೆ ಶರೀರನಾಮದಿ ಕರೆಸುವನು,
ಹದಿನಾರು ಕಳೆಗಳು ಉಳ್ಳ ಲಿಂಗದಿ ಪುರುಷನಾಮಕನು,
ತೋರುವನು ಅನಿರುದ್ಧದೊಳು ಶಾಂತೀರಮಣ ಅನಿರುದ್ಧರೂಪದಿ,
ಪ್ರೇರಿಸುವ ಪ್ರದ್ಯುಮ್ನ ಸ್ಥೂಲ ಕಳೇವರದೊಳಿದ್ದು ॥ ೨೬ ॥

ಮೊದಲು ತ್ವಕ್ಚರ್ಮಗಳು ಮಾಂಸವು ರುಧಿರ ಮೇದೋ ಮಜ್ಜವು–
ಅಸ್ಥಿಗಳಿದರೊಳಗೆ ಏಕೋನ ಪಂಚಾಶನ್ಮರುದ್ಗಣವು,
ನಿಧನ ಹೀಂಕಾರಾದಿ ಸಾಮಗ ಅದರ ನಾಮದಿ ಕರೆಸುತ,
ಒಂಭತ್ತಧಿಕ ನಾಲ್ವತ್ತೆನಿಪ ರೂಪದಿ ಧಾತುಗಳೊಳಿಪ್ಪ ॥ ೨೭ ॥

ಸಪ್ತಧಾತುಗಳೊಳಹೊರಗೆ ಸಂತಪ್ತಲೋಹಗತಾಗ್ನಿಯಂದದಿ,
ಸಪ್ತಸಾಮಗನಿಪ್ಪ ಅನ್ನ ಮಯಾದಿ ಕೋಶದೊಳು,
ಲಿಪ್ತನಾಗದೆ ತತ್ತದಾಹ್ವಯ ಕ್ಲುಪ್ತಭೋಗವ ಕೊಡುತ,
ಸ್ವಪ್ನ ಸುಷುಪ್ತಿ ಜಾಗ್ರತೆಯೀವ ತೈಜಸ ಪ್ರಾಜ್ಞ ವಿಶ್ವಾಖ್ಯ ॥ ೨೮ ॥

ತೀವಿಕೊಂಡಿಹವಲ್ಲಿ ಮಜ್ಜ ಕಳೇವರದಿ ಅಂಗುಳಿಯ ಪರ್ವದ ಠಾವಿನಲಿ–
ಮುನ್ನೂರು ಅರವತ್ತೆನಿಪ ತ್ರಿಸ್ಥಳದಿ,
ಸಾವಿರದ ಎಂಭತ್ತು ರೂಪವ ಕೋವಿದರು ಪೇಳುವರು ದೇಹದಿ,
ದೇವತೆಗಳೊಡಗೂಡಿ ಕ್ರೀಡಿಸುವನು ರಮಾರಮಣ ॥ ೨೯ ॥

ಕೀಟ ಪೇಶಸ್ಕಾರಿ ನೆನವಿಲಿ ಕೀಟ ಭಾವವ ತೊರೆದು,
ತದ್ವತ್ ಖೇಟರೂಪವನೈದಿಯಾಡುವ ತೆರದಿ,
ಭಕುತಿಯಲಿ ಕೈಟಭಾರಿಯ ಧ್ಯಾನದಿಂದ ಭವಾಟವಿಯನತಿ ಶ್ರೀಘ್ರದಿಂದಲಿ ದಾಟಿ,
ಸಾರೂಪ್ಯವನು ಐದುವರಲ್ಪಜೀವಿಗಳು ॥ ೩೦ ॥

ಈ ಪರೀ ದೇಹದೊಳು ಭಗವದ್ರೂಪಗಳ ಮರೆಯದಲೆ ಮನದಿ ಪದೋಪದೇ ಭಕುತಿಯಲಿ
ಸ್ಮರಿಸುತಲಿಪ್ಪ ಭಕುತರನಾ,
ಗೋಪತಿ ಜಗನ್ನಾಥ ವಿಠಲ ಸಮೀಪಗನು ತಾನಾಗಿ ಸಂತತ,
ಸಾಪರೋಕ್ಷಿಯ ಮಾಡಿ ಪೊರೆವನು ಎಲ್ಲ ಕಾಲದಲಿ ॥ ೩೧ ॥

॥ ಇತಿ ವರ್ಣಪ್ರಕ್ರಿಯ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

## ॥ ೧೦. ಶ್ರೀ ಸರ್ವಪ್ರತೀಕ ಸಂಧಿ ॥

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ,
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥

ಆವ ಪರಬೊಮ್ಮನತಿವಿಮಲಾಂಗಾವ ಬದ್ಧರು ಎಂದೆನಿಪ–
ರಾಜೀವ ಭವ ಮೊದಲಾದಮರರನುದಿನದಿ ಹರಿ ಪದವ ಸೇವಿಪರಿಗನುಕೂಲರಲ್ಲದೆ–
ತಾವು ಇವರನು ಕೆಡಿಸಬಲ್ಲರೆ,
ಶ್ರೀವಿಲಾಸಾಸ್ಪದನ ದಾಸರಿಗುಂಟೆ ಅಪಜಯವು ॥ ೧ ॥

ಶ್ರೀದನಂಘ್ರಿಸರೋಜಯುಗಳ ಏಕಾದಶಸ್ಥಾನಾತ್ಮದೊಳಗಿಟ್ಟು–
ಆದರದಿ ಸಂತುತಿಸಿ ಹಿಗ್ಗುವರಿಗೀ ನವಗ್ರಹವು,
ಆದಿತೇಯರು ಸಂತತಾಧಿವ್ಯಾಧಿಗಳ ಪರಿಹರಿಸುತವರನ ಕಾದುಕೊಂಡಿಹರು,
ಎಲ್ಲರೊಂದಾಗೀಶ ನಾಜ್ಞೆಯಲಿ ॥ ೨ ॥

ಮೇದಿನಿಯ ಮೇಲುಳ್ಳ ಗೋಷ್ಪಾದೋದಕಗಳೆಲ್ಲಮಲ ತೀರ್ಥವು,
ಪಾದ ಪಾದ್ರಿ ಧರಾತಳವೆ ಸುಕ್ಷೇತ್ರ,
ಜೀವಗಣ ಶ್ರೀದನ ಪ್ರತಿಮೆಗಳು, ಅವರುಂಬೋದನವೆ ನೈವೇದ್ಯ,
ನಿತ್ಯದಿ ಹಾದಿ ನಡೆವುದೆ ನರ್ತನಗಳೆಂದರಿತವನೆ ಯೋಗಿ ॥ ೩ ॥

ಸರ್ವದೇಶವು ಪುಣ್ಯದೇಶವು, ಸರ್ವಕಾಲವು ಪರ್ವಕಾಲವು,
ಸರ್ವಜೀವರು ದಾನ ಪಾತ್ರರು ಮೂರು ಲೋಕದೊಳು,
ಸರ್ವಮಾತುಗಳೆಲ್ಲ ಮಂತ್ರವು, ಸರ್ವಕೆಲಸಗಳೆಲ್ಲ ಪೂಜೆಯು,
ಶರ್ವವಂದ್ಯನ ವಿಮಲ ಮೂರ್ತಿ ಧ್ಯಾನವುಳ್ಳವಗೆ ॥ ೪ ॥

ದೇವಖಾತ ತಟಾಕ ವಾಪಿ ಸರೋವರಗಳಭಿಮಾನಿ ಸುರರು,
ಕಳೇವರದೊಳಗಿಹ ರೋಮ ಕೂಪಗಳೊಳಗೆ ತುಂಬಿಹರು,
ಆ ವಿಯದ್ಗಂಗಾದಿ ನದಿಗಳು ಭಾವಿಸುವದೆಪ್ಪತ್ತೆರಡೆನಿಪ ಸಾವಿರ ಸುನಾಡಿಗಳೊಳಗೆ,
ಪ್ರವಹಿಸುತಲಿಹವೆಂದು ॥ ೫ ॥

ಮೂರು ಕೋಟಿಯು ಮೇಲೆ ಶೋಭಿಪ ಈರಧಿಕ ಎಪ್ಪತ್ತು ಸಾವಿರ, ।
ಮಾರುತಾಂತರ್ಯಾಮಿ ಮಾಧವ ಪ್ರತಿದಿವಸದಲ್ಲಿ,
ತಾ ರಮಿಸುತಿಹನೆಂದು ತಿಳಿದಿಹ ಸೂರಿಗಳು ದೇವತೆಗಳು,
ಅವರ ಶರೀರವೇ ಸುಕ್ಷೇತ್ರ, ಅವರರ್ಚನೆಯೆ ಹರಿಪೂಜೆ ॥ ೬ ॥

ಶ್ರೀವರನಿಗಭಿಷೇಕ ವೆಂದರಿದೀ ವಸುಂಧರೆಯೊಳಗೆ ಬಲ್ಲವರು,
ಆವ ಜಲದಲಿ ಮಿಂದರೆಯು ಗಂಗಾದಿ ತೀರ್ಥಗಳು ತಾ ವೊಲಿದು ಬಂದಲ್ಲಿ-
ನೆಲೆಗೊಂಡೀವರಖಿಳಾರ್ಥಗಳನು,
ಅರಿಯದ ಜೀವರಮರ ತರಂಗಿಣಿಯ ನೈದಿದರು ಫಲವೇನು ॥ ೭ ॥

ನದನದಿಗಳಿಳೆಯೊಳಗೆ ಪರಿವವು ಉದಧಿ ಪರಿಯಂತರದಿ,
ತರುವಾಯದಲಿ ರಮಿಸುವವಲ್ಲಿ ತನ್ಮಯವಾಗಿ ತೋರದಲೆ,
ವಿಧಿನಿಷೇಧಗಳಾಚರಿಸುವರು ಬುಧರು,
ಭಗವದ್ರೂಪ ಸರ್ವತ್ರದಲಿ ಚಿಂತನೆ ಬರಲು ತ್ಯಜಿಸುವರಖಿಳ ಕರ್ಮಗಳ ॥ ೮ ॥

ಕಲಿಯೆ ಮೊದಲಾದಖಿಳ ದಾನವರೊಳಗೆ, ಬ್ರಹ್ಮ ಭವಾದಿ ದೇವರ್ಕಳು ನಿಯಾಮಕರಾಗಿ-
ಹರಿಯಾಜ್ಞೆಯಲಿ ಅವರವರ ಕಲುಷ ಕರ್ಮವ ಮಾಡಿ ಮಾಡಿಸಿ,
ಜಲರುಹೇಕ್ಷಣಗರ್ಪಿಸುತ,
ನಿಶ್ಚಲ ಸುಭಕ್ತಿ ಜ್ಞಾನ ಪೂರ್ಣರು ಸುಖಿಪರವರೊಳಗೆ ॥ ೯ ॥

ಆವ ಜೀವರೊಳಿದ್ದರೇನು, ಇನ್ನಾವ ಕರ್ಮವ ಮಾಡಲೇನು,
ಇನ್ನಾವ ಗುಣರೂಪಗಳುಪಾಸನೆ ಮಾಡಲೇನವರು,
ಕಾವನಯ್ಯನ ಪರಮ ಕಾರುಣ್ಯಾವ ಲೋಕನ ಬಲದಿ ಚರಿಸುವ ದೇವತೆಗಳನು,
ಮುಟ್ಟಲಾಪವೆ ಪಾಪಕರ್ಮಗಳು ॥ ೧೦ ॥

ಪತಿಯೊಡನೆ ಮನಬಂದ ತೆರದಲಿ ಪ್ರತಿದಿವಸದಲಿ ರಮಿಸಿ ಮೋದಿಸಿ,
ಸುತರ ಪಡೆದಿಳೆಯೊಳು ಜಿತೇಂದ್ರಿಯಳೆಂದು ಕರೆಸುವಳು,
ಕೃತಿಪತಿ ಕಥಾಮೃತ ಸುಭೋಜನರತ ಮಹಾತ್ಮರಿಗೆ,
ಇತರ  ದೋಷ ಪ್ರತತಿಗಳು ಸಂಬಂಧಿಸುವವೇನಚ್ಯುತನ ದಾಸರಿಗೆ ॥ ೧೧ ॥

ಸೂಸಿಬಹ ನದಿಯೊಳಗೆ ತನ್ನ ಸಹಾಸತೋರುವೆನೆನುತ,
ಜಲಕೆದುರೀಸಿದರೆ ಕೈಸೋತು ಮುಳುಗುವ,
ಹರಿಯ ಬಿಟ್ಟವನು ಕ್ಲೇಶ ವೈದುವ, ಅನಾದಿಯಲಿ ಸಾರ್ವೇಶ ಕ್ಲುಪ್ತಿಯ ಮಾಡಿದುದ-
ಬಿಟ್ಟಾಶೆಯಿಂದಲಿ ಅನ್ಯರಾರಾಧಿಸುವ ಮಾನವನು ॥ ೧೨ ॥

ನಾನುನನ್ನದು ಎಂಬ ಜಡಮತಿ ಮಾನವನು ದಿನದಿನದಿ ಮಾಡುವ-
ಸ್ನಾನಜಪ ದೇವಾರ್ಚನೆಯೆ ಮೊದಲಾದ ಕರ್ಮಗಳ-
ದಾನವರು ಶೆಳೆದೊಯ್ವರಲ್ಲದೆ ಶ್ರೀನಿವಾಸನು ಸ್ವೀಕರಿಸ,
ಮದ್ದಾನೆ ಪಕ್ವಕಪಿತ್ಥಫಲ ಭಕ್ಷಿಸಿದ ವೋಲಹುದು ॥ ೧೩ ॥

ಧಾತ್ರಿಯೊಳಗುಳ್ಳಖಿಳ ತೀರ್ಥ ಕ್ಷೇತ್ರ ಚರಿಸಿದರೇನು,
ಪಾತ್ರಾಪಾತ್ರವರಿತನ್ನಾದಿ ದಾನವ ಮಾಡಿ ಫಲವೇನು,
ಗಾತ್ರ ನಿರ್ಮಲನಾಗಿ ಮಂತ್ರ ಸ್ತೋತ್ರ ಪಠಿಸಿದರೇನು,
ಹರಿ ಸರ್ವತ್ರಗತನೆಂದರಿಯದೆ ತಾ ಕರ್ತೃ ಎಂಬುವನು ॥ ೧೪ ॥

ಕಂಡ ನೀರೊಳು ಮುಳುಗಿ ದೇಹವ ದಂಡಿಸಿದ ಫಲವೇನು,
ದಂಡ ಕಮಂಡಲಂಗಳ ಧರಿಸಿ ಯತಿಯೆಂದೆನಿಸಿ ಫಲವೇನು,
ಅಂಡಜಾಧಿಪನಂಸಗನ ಪದ ಪುಂಡರೀಕದಿ ಮನವಹರ್ನಿಶಿ,
ಬಂಡುಣಿಯವೋಲಿರಿಸಿ ಸುಖಬಡದಿಪ್ಪ ಮಾನವನು ॥ ೧೫ ॥

ವೇದಶಾಸ್ತ್ರಪುರಾಣ ಕಥೆಗಳ ಓದಿ ಪೇಳಿದರೇನು,
ಸಕಲ ನಿಷೇಧ ಕರ್ಮಗಳ ತೊರೆದು ಸತ್ಕರ್ಮಗಳ ಮಾಡೇನು,
ಓದನಂಗಳ ಜರಿದು ಶ್ವಾಸ ನಿರೋಧಗೈಸಿದರೇನು,
ಕಾಮ ಕ್ರೋಧವಳಿಯದೆ ನಾನು ನನ್ನದು ಯೆಂಬ ಮಾನವನು ॥ ೧೬ ॥

ಏನು ಕೇಳಿದರೇನು ನೋಡಿದರೇನು ಓದಿದರೇನು–
ಪೇಳಿದರೇನು ಪಾಡಿದರೇನು ಮಾಡಿದರೇನು ದಿನದಿನದಿ,
ಶ್ರೀನಿವಾಸನ ಜನ್ಮಕರ್ಮ ಸದಾನುರಾಗದಿ ನೆನೆದು,
ತತ್ತತ್ಸ್ಥಾನದಲಿ ತದ್ರೂಪ ತನ್ನಾಮಕನ ಸ್ಮರಿಸದವ ॥ ೧೭ ॥

ಬುದ್ಧಿವಿದ್ಯಾಬಲದಿ ಪೇಳಿದ ಅಶುದ್ಧಕಾವ್ಯವಿದಲ್ಲ,
ತತ್ವ ಸುಪದ್ಧತಿಗಳನು ತಿಳಿದ ಮಾನವನಲ್ಲ ಬುಧರಿಂದ,
ಮಧ್ವ ವಲ್ಲಭ ತಾನೆ ಹೃದಯದೊಳಿದ್ದು ನುಡಿದಂದದಲಿ ನುಡಿದೆನು,
ಅಪದ್ಧಗಳ ನೋಡದಲೆ ಕಿವಿಗೊಟ್ಟಾಲಿಪುದು ಬುಧರು ॥ ೧೮ ॥

ಕಬ್ಬಿನೊಳಗಿಹ ರಸ ವಿದಂತನಿಗಬ್ಬ ಬಲ್ಲುದೆ?
ಭಾಗ್ಯ ಯೌವನ ಮಬ್ಬಿನಲಿ ಮೈಮರೆದವಗೆ ಹರಿಸುಚರಿತಾಮೃತವು ಲಭ್ಯವಾಗದು,
ಹರಿ ಪದಾಬ್ಜದಿ ಹಬ್ಬಿದತಿ ಸದ್ಭಕ್ತಿರಸ–
ವುಂಡುಬ್ಬಿ ಕೊಬ್ಬಿ ಸುಖಾಬ್ಧಿಯೊಳಗಾಡುವವಗಲ್ಲದಲೆ ॥ ೧೯ ॥

ಖಗವರಧ್ವಜನಂಘ್ರಿ ಭಕುತಿಯ ಬಗೆಯನರಿಯದ ಮಾನವರಿಗಿದು,
ಒಗಟಿನಂದದಿ ತೋರುತಿಪ್ಪುದು ಎಲ್ಲ ಕಾಲದಲಿ,
ತ್ರಿಗುಣ ವರ್ಜಿತನಮಲ ಗುಣಗಳ ಪೊಗಳಿ ಹಿಗ್ಗುವ ಭಾಗವತರಿಗೆ,
ಮಿಗೆ ಭಕುತಿ ವಿಜ್ಞಾನ ಸುಖವಿತ್ತವರ ರಕ್ಷಿಪುದು ॥ ೨೦ ॥

ಪರಮ ತತ್ವರಹಸ್ಯವಿದು ಭೂಸುರರು ಕೇಳುವುದು ಸಾದರದಿ,
ನಿಷ್ಠುರಿಗಳಿಗೆ ಮೂಢರಿಗೆ ಪಂಡಿತಮಾನಿ ಪಿಶುನರಿಗೆ–
ಅರಸಿಕರಿಗಿದು ಪೇಳ್ವುದಲ್ಲ,
ಅನವರತ ಭಗವತ್ಪಾದಯುಗಳಾಂಬುರುಹ ಮಧುಕರನೆನಿಸುವರಿಗಿದನರುಪು ಮೋದದಲಿ ॥ ೨೧ ॥

ಲೋಕವಾರ್ತೆಯಿದಲ್ಲ, ಪರಲೋಕೈಕನಾಥನ ವಾರ್ತೆ, ಕೇಳ್ವಡೆ,
ಕಾಕುಮನುಜರಿಗಿದು ಸಮರ್ಪಕವಾಗಿ ಸೊಗಸುವದೇ?,
ಕೋಕನದ ಪರಿಮಳವು ಷಟ್ಪದ ಸ್ವೀಕರಿಸುವಂದದಲಿ,
ಜಲಚರ ಭೇಕ ಬಲ್ಲುದೆ ಇದರ ರಸ ಹರಿ ಭಕುತಗಲ್ಲದಲೆ ॥ ೨೨ ॥

ಸ್ವಪ್ರಯೋಜನ ರಹಿತ, ಸಕಲೇಷ್ಟಪ್ರದಾಯಕ,
ಸರ್ವಗುಣ ಪೂರ್ಣಪ್ರಮೇಯ, ಜರಾಮರಣವರ್ಜಿತ, ವಿಗತಕ್ಲೇಶ,
ವಿಪ್ರತಮ, ವಿಶ್ವಾತ್ಮ ಘೃಣಿ, ಸೂರ್ಯಪ್ರಕಾಶಾನಂತ ಮಹಿಮ,
ಘೃತಪ್ರತೀಕಾರಾಧಿತಾಂಘ್ರಿ ಸರೋಜ ಸುರರಾಜ ॥ ೨೩ ॥

ವನಚರಾದ್ರಿ ಧರಾಧರನೆ ಜಯ, ಮನುಜ ಮೃಗವರ ವೇಷ ಜಯ,
ವಾಮನ ತ್ರಿವಿಕ್ರಮ ದೇವ ಜಯ, ಭೃಗುರಾಮ ಭೂಮ ಜಯ,
ಜನಕಜಾವಲ್ಲಭನೆ ಜಯ, ರುಗ್ಮಿಣಿ ಮನೋರಥ, ಸಿದ್ಧಿದಾಯಕ,
ಜಿನವಿಮೋಹಕ, ಕಲಿವಿದಾರಣ, ಜಯ ಜಯಾರಮಣ ॥ ೨೪ ॥

ಸಚ್ಚಿದಾನಂದಾತ್ಮ, ಬ್ರಹ್ಮ ಕರಾರ್ಚಿತಾಂಘ್ರಿ ಸರೋಜ,
ಸುಮನಸಪ್ರೋಚ್ಚ, ಸನ್ಮಂಗಳದ, ಮಧ್ವಾಂತ: ಕರಣರೂಢ,
ಅಚ್ಯುತ, ಜಗನ್ನಾಥ ವಿಠಲ, ನಿಚ್ಚ ನೆಚ್ಚಿದ ಜನರ ಬಿಡ,
ಕಾಡ್ಗಿಚ್ಚನುಂಡಾರಣ್ಯದೊಳು ಗೋ ಗೋಪರನು ಕಾಯಿದಾ ॥ ೨೫ ॥

॥ ಇತಿ ಶ್ರೀ ಸರ್ವಪ್ರತೀಕ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

॥ ೧೧. ಶ್ರೀ ಸ್ಥಾವರಜಂಗಮ ಸಂಧಿ ॥
॥ ೧೧. ಶ್ರೀ ಧ್ಯಾನಪ್ರಕ್ರಿಯ ಸಂಧಿ ॥

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ,
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥

ಪಾದುಕೆಯು ಕಂಟಕ ಸಿಕತ ಮೊದಲಾದವನುದಿನ ಬಾಧಿಸುವವೇ?
ಏಕಾದಶೇಂದ್ರಿಯಗಳಲಿ ಬಿಡದೆ ಹೃಷೀಕಪನ ಮೂರ್ತಿ ಸಾದರದಿ ನೆನೆವವನು,
ಏನಪರಾಧಗಳ ಮಾಡಿದರು ಸರಿಯೆ,
ನಿರೋಧಗೈಸವು ಮೋಕ್ಷಮಾರ್ಗಕೆ ದುರಿತರಾಶಿಗಳು ॥ ೧ ॥

ಹಗಲು ನಂದಾದೀಪದಂದದಿ ನಿಗಮವೇದ್ಯನ ಪೂಜಿಸುತ-
ಕೈಮುಗಿದು ನಾಲ್ಕರೊಳೊಂದು ಪುರುಷಾರ್ಥವನು ಬೇಡದಲೆ,
ಜಗದುದರ ಕೊಟ್ಟುದನು ಭುಂಜಿಸು, ಮಗಮಡದಿ ಪ್ರಾಣೇಂದ್ರಿಯಾತ್ಮಾದಿಗಳು-
ಭಗವದಧೀನವೆಂದಡಿಗಡಿಗೆ ನೆನೆವುತಿರು ॥ ೨ ॥

ಅಸ್ವತಂತ್ರನು ಜೀವ, ಹರಿ ಸರ್ವಸ್ವತಂತ್ರನು, ನಿತ್ಯಸುಖಮಯ,
ನಿ:ಸ್ವಬದ್ಧ, ಅಲ್ಪಜ್ಞ ಶಕ್ತ, ಸದು:ಖ, ನಿರ್ವಿಣ್ಣ,
ಹ್ರಸ್ವದೇಹಿ ಸನಾಥಜೀವನು, ವಿಶ್ವವ್ಯಾಪಕ ಕರ್ತೃ,
ಬ್ರಹ್ಮ ಸರಸ್ವತೀಶಾದ್ಯಮರನುತ ಹರಿಯೆಂದು ಕೊಂಡಾಡು ॥ ೩ ॥

ಮತ್ತೆ ವಿಶ್ವಾದ್ಯೆಂಟು ರೂಪೊಂಭತ್ತರಿಂದಲಿ ಪೆಚ್ಚಿಸಲು,
ಎಪ್ಪತ್ತೆರಡು ರೂಪಗಳಹವು ಒಂದೊಂದೆ ಸಾಹಸ್ರ,
ಪೃಥ್‌ಪೃಥಕು ನಾಡಿಗಳೊಳಗೆ ಸರ್ವೋತ್ತಮನ ತಿಳಿಯೆಂದು ಭೀಷ್ಮನು ಬಿತ್ತರಿಸಿದನು-
ಧರ್ಮತನಯಗೆ ಶಾಂತಿ ಪರ್ವದಲಿ ॥ ೪ ॥

ಎಂಟು ಪ್ರಕೃತಿಗಳೊಳಗೆ ವಿಶ್ವಾದ್ಯೆಂಟು ರೂಪದಲಿದ್ದು,
ಭಕ್ತರ ಕಂಟಕವ ಪರಿಹರಿಸುತಲಿ ಪಾಲಿಸುವ ಪ್ರತಿದಿನದಿ,
ನೆಂಟನಂದದಿ ಎಡಬಿಡದೆ ವೈಕುಂಠರಮಣನು-
ತನ್ನವರ ನಿಷ್ಕಂಟಕ ಸುಮಾರ್ಗದಲಿ ನಡೆಸುವ, ದುರ್ಜನರ ಬಡಿವ ॥ ೫ ॥

ಸ್ವರಮಣನು ಶಕ್ತ್ಯಾದಿ ರೂಪದಿ ಕರಣಮಾನಿಗಳೊಳಗೆ ನೆಲೆಸಿದ್ದು,
ಅರವಿದೂರನು ಸ್ಥೂಲ ವಿಷಯಗಳುಂಡುಣಿಪ ನಿತ್ಯ,
ಅರಿಯದಲೆ ನಾನುಂಬೆನೆಂಬುವ ನಿರಯಗಳುಂಬುವನು,
ನಿಶ್ಚಯ ಮರಳಿ ಮರಳಿ ಭವಾಟವಿಯ ಸಂಚರಿಸಿ ಬಳಲುವನು ॥ ೬ ॥

ಸುರುಚಿ ರುಚಿರ ಸುಗಂಧ ಸುಚಿಯೆಂದಿರುತಿಹನು ಷಡ್ರಸಗಳೊಳು,
ಹನ್ನೆರಡು ರೂಪದಲಿಪ್ಪ ಶ್ರೀ ಭೂ ದುರ್ಗೆಯರ ಸಹಿತ,
ಸ್ವರಮಣನು ಎಪ್ಪತ್ತೆರಡು ಸಾವಿರ ಸಮೀರನ ರೂಪದೊಳಗಿದ್ದು,
ಉರುಪರಾಕ್ರಮ ಕರ್ತೃ ಎನಿಸುವ ನಾಡಿಗಳೊಳಗಿದ್ದು ॥ ೭ ॥

ನಿನ್ನ ಸರ್ವತ್ರದಲಿ ನೆನೆವವರನ್ಯ ಕರ್ಮವ ಮಾಡಿದರು ಸರಿ,
ಪುಣ್ಯ ಕರ್ಮಗಳೆನಿಸುವವು ಸಂದೇಹವಿನಿತಿಲ್ಲ,
ನಿನ್ನ ಸ್ಮರಿಸದೆ ಸ್ನಾನ ಜಪ ಹೋಮಾನ್ನ ವಸ್ತ್ರ ಗಜಾಶ್ವ–
ಭೂಧನ ಧಾನ್ಯ ಮೊದಲಾದಖಿಳ ಧರ್ಮವ ಮಾಡಿ ಫಲವೇನು ॥ ೮ ॥

ಇಷ್ಟ ಭೋಗ್ಯ ಪದಾರ್ಥದೊಳು ಶಿಪಿವಿಷ್ಟನಾಮದಿ–
ಸರ್ವಜೀವರ ತುಷ್ಟಿ ಬಡಿಸುವ ದಿನದಿನದಿ ಸಂತುಷ್ಟ ತಾನಾಗಿ,
ಕೋಷ್ಟದೊಳು ನೆಲೆಸಿದ್ದು ರಸಮಯ, ಪುಷ್ಟಿಯೈದಿಸುತಿಂದ್ರಿಯಗಳೊಳು,
ಪ್ರೇಷ್ಟನಾಗಿದ್ದೆಲ್ಲ ವಿಷಯಗಳುಂಬ ತಿಳಿಸದಲೆ ॥ ೯ ॥

ಕಾರಣಾಹ್ವಯ ಜ್ಞಾನ ಕರ್ಮ ಪ್ರೇರಕನು ತಾನಾಗಿ,
ಕ್ರಿಯೆಗಳ ತೋರುವನು ಕರ್ಮೇಂದ್ರಿಯಾಧಿಪರೊಳಗೆ ನೆಲೆಸಿದ್ದು,
ಮೂರು ಗುಣಮಯ ದ್ರವ್ಯಗ ತದಾಕಾರ ತನ್ನಾಮದಲಿ ಕರೆಸುವ,
ತೋರಿಕೊಳ್ಳದೆ ಜನರ ಮೋಹಿಪ ಮೋಹಕಲ್ಪಕನು ॥ ೧೦ ॥

ದ್ರವ್ಯನೆನಿಸುವ ಭೂತಮಾತ್ರದೊಳವ್ಯಯನು, ಕರ್ಮೇಂದ್ರಿಯಗಳೊಳು ಭವ್ಯ,
ಸತ್ಕ್ರಿಯನೆನಿಪ ಜ್ಞಾನೇಂದ್ರಿಯಗಳೊಳಗಿದ್ದು,
ಸ್ತವ್ಯಕಾರಕನೆನಿಸಿ ಸುಖಮಯ, ಸೇವ್ಯ ಸೇವ್ಯಕನೆನಿಸಿ ಜಗದೊಳು,
ಹವ್ಯವಾಹನನರಣಿ ಯೊಳಗಿಪ್ಪಂತೆ ಇರುತಿಪ್ಪ ॥ ೧೧ ॥

ಮನವೆ ಮೊದಲಾದಿಂದ್ರಿಯಗಳೊಳಗನಿಲದೇವನು–
ಶುಚಿಯೆನಿಸಿಕೊಂಡನವರತ ನೆಲೆಸಿಪ್ಪ ಶುಚಿಷದ್ಯೋತನೆಂದೆನಿಸಿ,
ತನುವಿನೊಳಗಿಪ್ಪನು ಸದಾ ವಾಮನ ಹೃಷೀಕೇಶಾಖ್ಯರೂಪದಲಿ,
ಅನುಭವಕೆ ತಂದೀವ ವಿಷಯಜ ಸುಖವ ಜೀವರಿಗೆ ॥ ೧೨ ॥

ಪ್ರೇರಕ ಪ್ರೇರ್ಯರೊಳು ಪ್ರೇರ್ಯ ಪ್ರೇರಕನು ತಾನಾಗಿ,
ಹರಿ ನಿರ್ವೈರದಿಂದ ಪ್ರವರ್ತಿಸುವ ತನ್ನಾಮರೂಪದಲಿ,
ತೋರಿಕೊಳ್ಳದೆ ಸರ್ವರೊಳು ಭಾಗೀರಥೀ ಜನಕನು ಸಕಲ ವ್ಯಾಪಾರಗಳ–
ತಾ ಮಾಡಿ ಮಾಡಿಸಿ ನೋಡಿ ನಗುತಿಪ್ಪ ॥ ೧೩ ॥

ಹರಿಯೆ ಮುಖ್ಯನಿಯಾಮಕನು ಎಂದರಿದು, ಪುಣ್ಯಾಪುಣ್ಯ-ಹರುಷಾಮರುಷ-
ಲಾಭಾಲಾಭ ಸುಖದು:ಖಾದಿ ದ್ವಂದ್ವಗಳ,
ನಿರುತ ಅವನಂಘ್ರಿಗೆ ಸಮರ್ಪಿಸಿ, ನರಕ ಭೂ ಸ್ವರ್ಗಾಪ ವರ್ಗದಿ,
ಕರಣ ನಿಯಾಮಕನ ಸರ್ವತ್ರದಲಿ ನೆನೆವುತಿರು ॥ ೧೪ ॥

ಮಾಣವಕ ತತ್ಫಲಗಳನುಸಂಧಾನವಿಲ್ಲದೆ ಕರ್ಮಗಳ ಸ್ವೇಚ್ಛಾನುಸಾರದಿ-
ಮಾಡಿ ಮೋದಿಸುವಂತೆ ಪ್ರತಿದಿನದಿ,
ಜ್ಞಾನಪೂರ್ವಕ ವಿಧಿನಿಷೇಧಗಳೇನು ನೋಡದೆ ಮಾಡು,
ಕರ್ಮ ಪ್ರಧಾನ ಪುರುಷೇಶನಲಿ ಭಕುತಿಯ ಮಾಡು ಕೊಂಡಾಡು ॥ ೧೫ ॥

ಹಾನಿ ವೃದ್ಧಿ ಜಯಾಪಜಯಗಳು ಏನು ಕೊಟ್ಟದ ಭುಂಜಿಸುತ,
ಲಕ್ಷ್ಮೀನಿವಾಸನ ಕರುಣವನೆ ಸಂಪಾದಿಸನುದಿನದಿ,
ಜ್ಞಾನ ಸುಖಮಯ ತನ್ನವರ ಪರಮಾನುರಾಗದಿ ಸಂತೈಪ,
ದೇಹಾನುಬಂಧಿಗಳಂತೆ ಒಳಹೊರಗಿದ್ದು ಕರುಣಾಳು ॥ ೧೬ ॥

ಆ ಪರಮ ಸಕಲೇಂದ್ರಿಯಗಳೊಳು ವ್ಯಾಪಕನು ತಾನಾಗಿ,
ವಿಷಯುವ ತಾ ಪರಿಗ್ರಹಿಸುವನು ತಿಳಿಸದೆ ಸರ್ವಜೀವರೊಳು,
ಪಾಪರಹಿತ ಪುರಾಣಪುರುಷ ಸಮೀಪದಲಿ ನೆಲೆಸಿದ್ದು,
ನಾನಾ ರೂಪಧಾರಕ ತೋರಿಕೊಳ್ಳದೆ ಕರ್ಮಗಳ ಮಾಳ್ಪ ॥ ೧೭ ॥

ಖೇಚರರು ಭೂಚರರು ವಾರಿನಿಶಾಚರರೊಳಿದ್ದವರ-
ಕರ್ಮಗಳಾಚರಿಸುವನು ಘನಮಹಿಮ ಪರಮಾಲ್ಪನೋಪಾದಿ,
ಗೋಚರಿಸನು ಬಹು ಪ್ರಕಾರಾಲೋಚನೆಯ ಮಾಡಿದರು ಮನಸಿಗೆ,
ಕೀಚಕಾರಿಪ್ರೀಯ, ಕವಿಜನಗೇಯ, ಮಹರಾಯ ॥ ೧೮ ॥

ಒಂದೆ ಗೋತ್ರ ಪ್ರವರ ಸಂಧ್ಯಾವಂದನೆಗಳನು ಮಾಡಿ,
ಪ್ರಾಂತಕೆ ತಂದೆ ತನಯರು ಬೇರೆ ತಮ್ಮಯ ಪೆಸರುಗೊಂಬಂತೆ,
ಒಂದೆ ದೇಹದೊಳಿದ್ದು ನಿಂದ್ಯಾನಿಂದ್ಯ ಕರ್ಮವ ಮಾಡಿ ಮಾಡಿಸಿ,
ಇಂದಿರೇಶನು ಸರ್ವಜೀವರೊಳೀಶ ನೆನಿಸುವನು ॥ ೧೯ ॥

ಕಿಟ್ಟಗಟ್ಟಿದಲೋಹ ಪಾವಕ ಸುಟ್ಟುವಿಂಗಡ ಮಾಡುವಂತೆ,
ಘರಟ್ಟವ್ರೀಹಿಗಳೊಳಿಪ್ಪ ತಂಡುಲ ಕಡೆಗೆ ತೆಗೆವಂತೆ,
ವಿಠಲಾ ಎಂದೊಮ್ಮೆ ಮೈಮರೆದಟ್ಟಹಾಸದಿ ಕರೆಯೆ,
ದುರಿತಗಳಟ್ಟುಳಿಯ ಬಿಡಿಸೆವನ ತನ್ನೊಳಗಿಟ್ಟು ಸಲಹುವನು ॥ ೨೦ ॥

ಜಲಧಿಯೊಳು ಸ್ವೇಚ್ಛಾನುಸಾರದಿ ಜಲಚರಪ್ರಾಣಿಗಳು,
ತತ್ತತ್-ಸ್ಥಲಗಳಲಿ ಸಂತೋಷಬಡುತಲಿ ಸಂಚರಿಸುವಂತೆ,
ನಳಿನನಾಭನೊಳಬ್ಜಭವ ಮುಪ್ಪೊಳಲುರಿಗ ವೈಗಣ್ಣ ಮೊದಲಾದ್ದಲವು ಜೀವರಗಣವು,
ವರ್ತಿಸುತಿಹದು ನಿತ್ಯದಲಿ ॥ ೨೧ ॥

ವಾಸುದೇವನು ಒಳಹೊರಗೆ ಅವಕಾಶದನು ತಾನಾಗಿ,
ಬಿಂಬ ಪ್ರಕಾಶಿಸುವ ತದ್ರೂಪ ತನ್ನಾಮದಲಿ ಸರ್ವತ್ರ,
ಈ ಸಮನ್ವಯುವೆಂದೆನಿಪ ಸದುಪಾಸನವ ಗೈವವನು,
ಮೋಕ್ಷಾನ್ವೇಷಿಗಳೊಳುತ್ತಮನು ಜೀವನ್ಮುಕ್ತನವನಿಯೊಳು ॥ ೨೨ ॥

ಭೋಗ್ಯವಸ್ತುಗಳೊಳಗೆ ಯೋಗ್ಯಾಯೋಗ್ಯ ರಸಗಳನರಿತು,
ಯೋಗ್ಯಾಯೋಗ್ಯರಲಿ ನೆಲೆಸಿಪ್ಪ ಹರಿಗೆ ಸಮರ್ಪಿಸನುದಿನದಿ,
ಭಾಗ್ಯ ಬಡತನ ಬರಲು ಹಿಗ್ಗದೆ, ಕುಗ್ಗಿ ಸೊರಗದೆ,
ಸದ್ಭಕುತಿ ವೈರಾಗ್ಯಗಳನೇ ಮಾಡು ನೀ ನಿರ್ಭಾಗ್ಯನೆನಿಸದಲೆ ॥ ೨೩ ॥

ಸ್ಥಲಜಲಾದ್ರಿಗಳಲ್ಲಿ ಜನಿಸುವ ಫಲಸುಪುಷ್ಪಜ ಗಂಧರಸ-
ಶ್ರೀ ತುಲಸಿ ಮೊದಲಾದಖಿಳ ಪೂಜಾಸಾಧನ ಪದಾರ್ಥ,
ಹಲವು ಬಗೆಯಿಂದರ್ಪಿಸುತ ಬಾಂಬೊಳೆಯ ಜನಕಗೆ ನಿತ್ಯನಿತ್ಯದಿ ತಿಳಿವುದಿದು,
ವ್ಯತಿರೇಕ ಪೂಜೆಗಳೆಂದು ಕೋವಿದರು ॥ ೨೪ ॥

ಶ್ರೀಕರನ ಸರ್ವತ್ರದಲಿ ಅವಲೋಕಿಸುತ ಗುಣರೂಪಕ್ರಿಯ-
ವ್ಯತಿರೇಕ ತಿಳಿಯದಲನ್ವಯಿಸು ಬಿಂಬನಲಿ ಮರೆಯದಲೆ,
ಸ್ವೀಕರಿಸುವನು ಕರುಣದಿಂದ, ನಿರಾಕರಿಸದೆ ಕೃಪಾಳು,
ಭಕ್ತರ ಶೋಕಗಳ ಪರಿಹರಿಸಿ ಸುಖವಿತ್ತನವರತ ಪೊರೆವ ॥ ೨೫ ॥

ಇನಿತು ವ್ಯತಿರೇಕಾನ್ವಯಗಳೆಂದೆನಿಪ ಪೂಜಾವಿಧಿಗಳನೆ ತಿಳಿದು,
ಅನಿಮಿಷೇಶನ ತೃಪ್ತಿಬಡಿಸುತಲಿರು ನಿರಂತರದಿ,
ಘನಮಹಿಮ ಕೈಕೊಂಡು ಸ್ಥಿತಿಮೃತಿ ಜನುಮಗಳ ಪರಿಹರಿಸಿ,
ಸೇವಕ ಜನರೊಳಿಟ್ಟಾನಂದಬಡಿಸುವ ಭಕ್ತವತ್ಸಲನು ॥ ೨೬ ॥

ಜಲಜನಾಭನಿಗೆರಡು ಪ್ರತಿಮೆಗಳಿಳೆಯೊಳಗೆ ಜಡಚೇತನಾತ್ಮಕ,
ಚಲದೊಳಿರ್ಬಗೆ ಸ್ತ್ರೀಪುರುಷ ಭೇದದಲಿ,
ಜಡದೊಳಗೆ ತಿಳಿವುದಾಹಿತಪ್ರತಿಮೆ, ಸಹಜಾಚಲಗಳೆಂದಿರ್ಬಗೆ ಪ್ರತೀಕದಿ,
ಲಲಿತ ಪಂಚತ್ರಯ ಸುಗೋಳಕವರಿತು ಭಜಿಸುತಿರು ॥ ೨೭ ॥

ವಾರಿಜಾಸನ ವಾಯುವೀಂದ್ರ ಉಮಾರಮಣ ನಾಕೇಶ ಸ್ಮರಹಂಕಾರಿಕಪ್ರಾಣಾದಿಗಳು–
ಪುರುಷರ ಕಳೇವರದಿ,
ತೋರಿಕೊಳದನಿರುದ್ಧ ದೋಷವಿದೂರ ನಾರಾಯಣನ ರೂಪ,
ಶರೀರಮಾನಿಗಳಾಗಿ ಭಜಿಸುತ ಸುಖವ ಕೊಡುತಿಹರು ॥ ೨೮ ॥

ಸಿರಿ ಸರಸ್ವತಿ ಭಾರತೀ ಸೌಪರಣಿ ವಾರುಣಿ ಪಾರ್ವತೀಮುಖರಿರುತಿಹರು–
ಸ್ತ್ರೀಯರೊಳಗಭಿಮಾನಿಗಳು ತಾವೆನಿಸಿ,
ಅರುಣವರ್ಣ ನಿಭಾಂಗ ಶ್ರೀಸಂಕರುಷಣ ಪ್ರದ್ಯುಮ್ನ ರೂಪಗಳ,
ಇರುಳು ಹಗಲು ಉಪಾಸನವ ಗೈವುತಲೆ ಮೋದಿಪರು ॥ ೨೯ ॥

ಕೃತಪ್ರತೀಕದಿ ಟಂಕಿ ಭಾರ್ಗವ ಹುತವಹಾನಿಲ ಮುಖ್ಯ ದಿವಿಜರು–
ತುತಿಸಿಕೊಳುತಭಿಮಾನಿಗಳು ತಾವಾಗಿ ನೆಲೆಸಿದ್ದು,
ಪ್ರತಿ ದಿವಸ ಶ್ರೀತುಲಸಿ ಗಂಧಾಕ್ಷತೆ ಕುಸುಮ ಫಲ ದೀಪ ಪಂಚಾಮೃತದಿ,
ಪೂಜಿಪ ಭಕುತರಿಗೆ ಕೊಡುತಿಹನು ಪುರುಷಾರ್ಥ ॥ ೩೦ ॥

ನಗಗಳಭಿಮಾನಿಗಳೆನಿಪ ಸುರರುಗಳು, ಸಹಜಾಚಲಗಳಿಗೆ ಮಾನಿಗಳೆನಿಸಿ,
ಶ್ರೀವಾಸುದೇವನ ಪೂಜಿಸುತಲಿಹರು,
ಸ್ವಗತಭೇದವಿವರ್ಜಿತನ ನಾಲ್ಬಗೆ ಪ್ರತೀಕದಿ ತಿಳಿದು ಪೂಜಿಸೆ,
ವಿಗತ ಸಂಸಾರಾಬ್ಧಿ ದಾಟಿಸಿ ಮುಕ್ತರನು ಮಾಳ್ಪ ॥ ೩೧ ॥

ಆವ ಕ್ಷೇತ್ರಕೆ ಪೋದರೇನು? ಇನ್ನಾವ ತೀರ್ಥದಿ ಮುಳಗಲೇನು?
ಇನ್ನಾವ ಜಪತಪ ಹೋಮದಾನವ ಮಾಡಿ ಫಲವೇನು,
ಶ್ರೀವರ ಜಗನ್ನಾಥ ವಿಠಲನ ಈ ವಿಧದಿ ಜಂಗಮಸ್ಥಾವರ ಜೀವರೊಳು–
ಪರಿಪೂರ್ಣನೆಂದರಿಯದಿಹ ಮಾನವನು ॥ ೩೨ ॥

॥ ಇತಿ ಶ್ರೀ ಸ್ಥಾವರಜಂಗಮ ಸಂಧಿ ಸಂಪೂರ್ಣಂ ॥
॥ ಇತಿ ಶ್ರೀ ಧ್ಯಾನಪ್ರಕ್ರಿಯ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

## ॥ ೧೨. ಶ್ರೀ ನಾಡೀಪ್ರಕರಣ ಸಂಧಿ ॥

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ,
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥

ವಾಸುದೇವನು ಪ್ರಾಣಮುಖ ತತ್ವೇಶರಿಂದಲಿ ಸೇವೆ ಕೈಕೊಳುತೀ–
ಶರೀರದೊಳಿಪ್ಪ ಮೂವತ್ತಾರು ಸಾಹಸ್ರ–
ಈ ಸುನಾಡಿಗಳೊಳಗೆ ಶ್ರೀಭೂಮೀ ಸಮೇತ ವಿಹಾರಗೈವ,
ಪರೇಶನಮಲ ಸುಮೂರ್ತಿಗಳ ಚಿಂತಿಸುತ ಹಿಗ್ಗುತಿರು ॥ ೧ ॥

ಚರಣಗಳೊಳಿಹ ನಾಡಿಗಳು ಹನ್ನೆರಡುಸಾವಿರ,
ಮಧ್ಯದೇಹದೊಳಿರುತಿಹವು ಹದಿನಾಲ್ಕು, ಬಾಹುಗಳೊಳಗೆ ಈರೆರಡು,
ಶಿರದೊಳಾರುಸಾಹಸ್ರ ಚಿಂತಿಸಿ, ಇರಳುಹಗಲಭಿಮಾನಿ ದಿವಿಜರ ನರಿತು–
ಉಪಾಸನೆಗೈವರಿಳೆಯೊಳು ಸ್ವರ್ಗವಾಸಿಗಳು ॥ ೨ ॥

ಬೃಹತಿನಾಮಕ ವಾಸುದೇವನು ವಹಿಸಿ ಸ್ತ್ರೀ–ಪುಂ ರೂಪ,
ದೋಷವಿರಹಿತ ಎಪ್ಪತ್ತೆರಡು ಸಾವಿರ ನಾಡಿಗಳೊಳಗಿದ್ದು,
ದ್ರುಹಿಣ ಮೊದಲಾದಮರಗಣ ಸನ್ಮಹಿಮ,
ಸರ್ವಪ್ರಾಣಿಗಳ ಮಹಮಹಿಮ ಸಂತೈಸುವನು ಸಂತತ ಪರಮ ಕರುಣಾಳು ॥ ೩ ॥

ನೂರು ವರುಷಕೆ ದಿವಸ ಮೂವತ್ತಾರುಸಾವಿರ ವಹವು,
ನಾಡಿ ಶರೀರದೊಳಗಿನಿತಿಹವು ಎಂದರಿತು, ಒಂದು ದಿವಸದಲಿ ಸೂರಿಗಳ ಸತ್ಕರಿಸಿದವ,
ಪ್ರತಿವಾರದಲಿ ದಂಪತಿಗಳರ್ಚನೆ ತಾ ರಚಿಸಿದವ,
ಸತ್ಯ ಸಂಶಯವಿಲ್ಲವೆಂದೆಂದು ॥ ೪ ॥

ಚತುರವಿಂಶತಿ ತತ್ತ್ವಗಳು, ತತ್ಪತಿಗಳೆನಿಸುವ ಬ್ರಹ್ಮಮುಖ ದೇವತೆಗಳನುದಿನ,
ಪ್ರತಿಪ್ರತಿ ನಾಡಿಗಳೊಳಿರುತಿದ್ದು,
ಚತುರದಶ ಲೋಕದೊಳು ಜೀವ ಪ್ರತತಿಗಳ ಸಂರಕ್ಷಿಸುವ ಶಾಶ್ವತನ,
ತತ್ತತ್ಸ್ಥಾನದಲಿ ನೋಡುತಲೆ ಮೋದಿಪರು ॥ ೫ ॥

ಸತ್ಯಸಂಕಲ್ಪನು ಸದಾ ಎಪ್ಪತ್ತೆರಡು ಸಾಹಸ್ರದೊಳು–
ಮೂವತ್ತುನಾಲಕುಲಕ್ಷದೈವತ್ತಾರು ಸಾಹಸ್ರ,
ಚಿತ್ಪ್ರಕೃತಿಯೊಡಗೂಡಿ ಪರಮನು ನಿತ್ಯಮಂಗಳಮೂರ್ತಿ,
ಭಕ್ತರ ತೆತ್ತಿಗನು ತಾನಾಗಿ ಸರ್ವತ್ರದಲಿ ಸಂತೈಪ ॥ ೬ ॥

ಮಣಿಗಳೊಳಗಿಹ ಸೂತ್ರದಂದದಿ ಪ್ರಣವಪಾದ್ಯನು,
ಸರ್ವಚೇತನ ಗಣದೊಳಿದ್ದನವರತ ಸಂತೈಸುವನು ತನ್ನವರ,
ಪ್ರಣತ ಕಾಮದ ಭಕ್ತ ಚಿಂತಾಮಣಿ, ಚಿದಾನಂದೈಕ ದೇಹನು,
ಅಣುಮಹದ್ಗತನಲ್ಪರೋಪಾದಿಯಲಿ ನೆಲೆಸಿಪ್ಪ ॥ ೭ ॥

ಈ ಸುಷುಮ್ನಾದ್ಯಖಿಳ ನಾಡೀ ಕೋಶ ನಾಭೀಮೂಲದಲಿ,
ವೃಷಣಾಸದನ ಮಧ್ಯದಲಿ ಇಪ್ಪದು ತುಂದಿನಾಮದಲಿ,
ಆ ಸರೋಜಾಸನ ಮುಖರು ಮೂಲೇಶನಾನಂದಾದಿ ಸುಗುಣೋಪಾಸನೆಯ ಗೈವುತಲಿ,
ದೇಹಗಳೊಳಗೆ ಇರುತಿಹರು ॥ ೮ ॥

ಸೂರಿಗಳು ಚಿತ್ತೈಸುವುದು, ಭಾಗೀರಥಿಯೆ ಮೊದಲಾದ ತೀರ್ಥಗಳು,
ಈರಧಿಕ ಎಪ್ಪತ್ತು ಸಾವಿರ ನಾಡಿಗಳೊಳಿಹವು,
ಈ ರಹಸ್ಯವನಲ್ಪ ಜನರಿಗೆ ತೋರಿ ಪೇಳದೆ,
ನಾಡಿನದಿಯೊಳು ಧೀರರನುದಿನ ಮಜ್ಜನವ ಮಾಡುತಲೆ ಸುಖಿಸುವರು ॥ ೯ ॥

ತಿಳಿವುದೀ ದೇಹದೊಳಗಿಹ ಎಡಬಲದ ನಾಡಿಗಳೊಳಗೆ ದಿವಿಜರು,
ಜಲಜಸಂಭವ ವಾಯು ವಾಣ್ಯಾದಿಗಳು ಬಲದಲ್ಲಿ,
ಎಲರುಣಿಗ ವಿಹಗೇಂದ್ರ ಚಳಿವೆಟ್ಟಳಿಯ ಷಣ್ಮಹಿಷಿಯರು–
ವಾರುಣಿ ಕುಲಿಶಧರ ಕಾಮಾದಿಗಳು ಎಡಭಾಗದೊಳಿಹರು ॥ ೧೦ ॥

ಇಕ್ಕಲದೊಳಿಹ ನಾಡಿಯೊಳು ದೇವರ್ಕಳಿಂದೊಡನಾಡುತಲಿ ಪೊಂಬಕ್ಕಿದೇರನು,
ಜೀವರಧಿಕಾರಾನು ಸಾರದಲಿ ತಕ್ಕ ಸಾಧನವ ಮಾಡಿ ಮಾಡಿಸುತ–
ಅಕ್ಕರದಿ ಸಂತೈಪ ಭಕ್ತರ,
ದಕ್ಕಗೊಡನಸುರರ್ಗೆ ಸತ್ಪುಣ್ಯಗಳನಪಹರಿಪ ॥ ೧೧ ॥

ತುಂದಿವಿಡಿದಾಶಿರದ ಪರಿಯಂತೊಂದು ವ್ಯಾಪಿಸಿ ಇಹುದು,
ತಾವರಕಂದನಿಹನದರೊಳಗೆ ಅದಕೀರೈದು ಶಾಖೆಗಳು,
ಒಂದಧಿಕ ದಶ ಕರಣದೊಳು ಸಂಬಂಧಗೈದಿಹವಲ್ಲಿ,
ರವಿಶಶಿ ಸಿಂಧುನಾಸತ್ಯಾದಿಗಳು ನೆಲೆಗೊಂಡಿಹರು ಸತತ ॥ ೧೨ ॥

ಪೊಕ್ಕಳಡಿವಿಡಿದೊಂದೆ ನಾಡಿಯು ಸುಕ್ಕದಲೆ ಧಾರಾಳರೂಪದಿ,
ಸಿಕ್ಕಿಹುದು ಈ ದೇಹದೊಳಗೆ ಸುಷುಮ್ನನಾಮದಲಿ,
ರಕ್ಕಸರನೊಳ ಪೊಗಗೊಡದೆ ದಶ ದಿಕ್ಕಿನೊಳಗೆ ಸಮೀರ ದೇವನು,
ಲೆಕ್ಕಿಸದೆ ಮತ್ತೊಬ್ಬರನು ಸಂಚರಿಪ ದೇಹದೊಳು ॥ ೧೩ ॥

ಇನಿತು ನಾಡೀಶಾಖೆಗಳು ತನುವಿನೊಳಗಿಹವೆಂದರಿದು,
ಏಕಾತ್ಮನು ದ್ವಿಸಪ್ತತಿ ಸಾವಿರಾತ್ಮಕನಾಗಿ ನಾಡಿಯೊಳು,
ವನಿತೆಯಿಂದೊಡಗೂಡಿ ನಾರಾಯಣ ದಿವಾರಾತ್ರಿಗಳಳೀ ಪರಿ,
ವನಜ ಜಾಂಡದೊಳಖಿಳಜೀವರೊಳಿದ್ದು ಮೋಹಿಸುವ ॥ ೧೪ ॥

ದಿನದಿನದಿ ವರ್ಧಿಸುವ ಕುಮುದಾಪ್ತನ ಮಯೂಖದ ಸೊಬಗ ಗತಲೋಚನ ವಿಲೋಕಿಸಿ,
ಮೋದಬಡಬಲ್ಲನೆ ನಿರಂತರದಿ,
ಕುನರಗೀ ಸುಕಥಾಮೃತದ ಭೋಜನದಸುಖ ದೊರಕುವದೆ,
ಲಕ್ಷ್ಮೀ ಮನೋಹರನ ಸದ್ಗುಣವ ಕೀರ್ತಿಪ ಭಕುತಗಲ್ಲದಲೆ ॥ ೧೫ ॥

ಈ ತನುವಿನೊಳಗಿಹವು ಓತಪ್ರೋತರೂಪದಿ ನಾಡಿಗಳು,
ಪುರುಹೂತಮುಖರಲ್ಲಿಹರು ತಮ್ಮಿಂದಧಿಕ ರೊಡಗೂಡಿ,
ಭೀತಿಗೊಳಿಸುತ ದಾನವರ ಸಂಘಾತನಾಮಕ ಹರಿಯ ಗುಣ,
ಸಂಪ್ರೀತಿಯಲಿ ಸದುಪಾಸನೆಯ ಗೈವುತಲೆ ಮೋದಿಪರು ॥ ೧೬ ॥

ಜಲಟಕುಕ್ಕುಟ ಖೇಟ ಜೀವರ ಕಳೆವರಗಳೊಳಿದ್ದು,
ಕಾಣಿಸಿ ಕೊಳದೆ ತತ್ತದ್ರೂಪ ನಾಮಗಳಿಂದ ಕರೆಸುತಲಿ,
ಜಲರುಹೇಕ್ಷಣ ವಿವಿಧ ಕರ್ಮಗಳನುದಿನದಿ ಮಾಡಿ,
ತತ್ತತ್ಫಲಗಳುಣ್ಣದೆ ಸಂಚರಿಸುವನು ನಿತ್ಯಸುಖಪೂರ್ಣ ॥ ೧೭ ॥

ತಿಳಿದುಪಾಸನೆ ಗೈವುತೀಪರಿ ಮಲಿನನಂತಿರು ದುರ್ಜನರ ಕಂಗಳಿಗೆ ಗೋಚರಿಸದೆ,
ವಿಪಶ್ಚಿತರೊಡನೆ ಗರ್ವಿಸದೆ,
ಮಳೆಬಿಸಿಲುಹಸಿತೃಷೆ ಜಯಾಜಯ ಖಳರ ನಿಂದ್ಯಾನಿಂದ್ಯ ಭಯಗಳಿಗಳುಕದಲೆ,
ಮದ್ದಾನೆಯಂದದಿ ಚರಿಸು ಧರೆಯೊಳಗೆ ॥ ೧೮ ॥

ಕಾನನಗ್ರಾಮಸ್ಥ ಸರ್ವ ಪ್ರಾಣಿಗಳು ಪ್ರತಿದಿವಸದಲಿ,
ಏನೇನು ಮಾಡುವ ಕರ್ಮಗಳು ಹರಿಪೂಜೆ ಯೆಂದರಿದು ದೇನಿಸುತ ಸದ್ಭಕ್ತಿಯಲಿ,
ಪವಮಾನವಂದಿತ ದೇವಾಂತರಾತ್ಮಕ ಶ್ರೀನಿವಾಸನಿಗರ್ಪಿಸುತ,
ಮೋದಿಸುತ ನಲಿವುತಿರು ॥ ೧೯ ॥

ನೋಕನೀಯನು ಲೋಕದೊಳು ಶುನಿ ಸೂಕರಾದಿಗಳೊಳಗೆ ನೆಲೆಸಿದ್ದು,
ಏಕಮೇವಾದ್ವಿತಿಯ ಬಹುರೂಪಾಹ್ವಯಗಳಿಂದ,
ತಾ ಕರೆಸುತೊಳಗಿದ್ದು ತಿಳಿಸದೆ, ಶ್ರೀಕಮಲಭವಮುಖ್ಯ ಸಕಲ ದಿವೌಕಸಗಣಾರಾಧ್ಯ,
ಕೈಕೊಂಡನವರತ ಪೊರೆವ ॥ ೨೦ ॥

ಇನಿತುಪಾಸನೆಗೈವುತಿಹ ಸಜ್ಜನರು, ಸಂಸಾರದಲಿ ಪ್ರತಿಪ್ರತಿ ದಿನಗಳಲಿ,
ಏನೇನು ಮಾಡುವುದೆಲ್ಲ ಹರಿಪೂಜೆ ಎನಿಸಿಕೊಂಬುದು, ಸತ್ಯವು,
ಈ ಮಾತಿನಲಿ ಸಂಶಯ ಬಡುವ ನರನಲ್ಪನು ಸುನಿಶ್ಚಯ,
ಬಾಹ್ಯಕರ್ಮವ ಮಾಡಿ ಫಲವೇನು ॥ ೨೧ ॥

ಭೋಗ್ಯಭೋಕ್ತೃಗಳೊಳಗೆ ಹರಿ ತಾ ಭೋಗ್ಯ ಭೋಕ್ತನು ಎನಿಸಿ,
ಯೋಗ್ಯಾ ಯೋಗ್ಯರಸಗಳ ದೇವದಾನವಗಣಕೆ ಉಣಿಸುವನು,
ಭಾಗ್ಯನಿಧಿ ಭಕ್ತರಿಗೆ ಸದ್ವೈರಾಗ್ಯ ಭಕ್ತಿ ಜ್ಞಾನವೀವ,
ಅಯೋಗ್ಯರಿಗೆ ದ್ವೇಷಾದಿಗಳ ತನ್ನಲ್ಲಿ ಕೊಡುತಿಪ್ಪ ॥ ೨೨ ॥

ಈ ಚತುರ್ದಶಭುವನದೊಳಗೆ ಚರಾಚರಾತ್ಮಕ ಜೀವರಲ್ಲಿ,
ವಿರೋಚನಾತ್ಮಜ ವಂಚಕನು ನೆಲೆಸಿದ್ದು ದಿನದಿನದಿ,
ಯಾಚಕನು ಯೆಂದೆನಿಸಿಕೊಂಬ, ಮರೀಚಿದಮನ, ಸುಹಂಸರೂಪ,
ನಿಷೇಚಕಾಹ್ವಯನಾಗಿ ಜನರಭಿಲಾಷೆ ಪೂರೈಪ ॥ ೨೩ ॥

ಅನ್ನದನ್ನಾದನ್ನಮಯ ಸ್ವಯಮನ್ನ, ಬ್ರಹ್ಮಾದ್ಯಖಿಳ ಚೇತನಕೆ,
ಅನ್ನಕಲ್ಪಕನಾಹನನಿರುದ್ಧಾದಿ ರೂಪದಲಿ,
ಅನ್ಯರನಪೇಕ್ಷಿಸದೆ, ಗುಣಕಾರುಣ್ಯಸಾಗರ ಸೃಷ್ಟಿಸುವನು ಹಿರಣ್ಯಗರ್ಭನೊಳಿದ್ದು,
ಪಾಲಿಸುವನು ಜಗತ್ರಯವ ॥ ೨೪ ॥

ತ್ರಿಪದ ತ್ರಿದಶಾಧ್ಯಕ್ಷ ತ್ರಿಸ್ಥ ತ್ರಿಪಥಗಾಮಿನಿಪಿತ ತ್ರಿವಿಕ್ರಮ,
ಕೃಪಣವತ್ಸಲ ಕುವಲಯದಳಶ್ಯಾಮ ನಿಸ್ಸೀಮ,
ಅಪರಿಮಿತಚಿತ್ಸುಖಗುಣಾತ್ಮಕ, ವಪುಷ ವೈಕುಂಠಾದಿ ಲೋಕಾಧಿಪ, ತ್ರಯೀಮಯ,
ತನ್ನವರ ನಿಷ್ಕಪಟದಿಂ ಪೊರೆವ ॥ ೨೫ ॥

ಲವಣ ಮಿಶ್ರಿತ ಜಲವು ತೋರ್ಪದು ಲವಣದೋಪಾದಿಯಲಿ ಜಿಹ್ವೆಗೆ,
ವಿವರಗೈಸಲು ಶಕ್ಯವಾಗುವದೇನೊ ನೋಳ್ಪರಿಗೆ,
ಸ್ವವಶವ್ಯಾಪೀ ಯೆನಿಸಿ ಲಕ್ಷ್ಮೀಧವ ಚರಾಚರದೊಳಗೆ ತುಂಬಿಹನು,
ಅವಿದಿತನ ಸಾಕಲ್ಯಬಲ್ಲವರಾರು ಸುರರೊಳಗೆ ॥ ೨೬ ॥

ವ್ಯಾಪ್ಯನಂದದಿ ಸರ್ವಜೀವರೊಳಿಪ್ಪ ಚಿನ್ಮಯ,
ಘೋರಭವ ಸಂತಪ್ಯಮಾನರು ಭಜಿಸೆ ಭಕುತಿಗಳಿಂದಲಿಹಪರದಿ ಪ್ರಾಪ್ಯನಾಗುವನು,
ಅವರವಗುಣಗಳೊಪ್ಪುಗೊಂಬನು, ಭಕ್ತವತ್ಸಲ,
ತಪ್ಪಿಸುವ ಜನ್ಮಾದಿದೋಷಗಳವರಿಗನವರತ ॥ ೨೭ ॥

ಹಲವು ಬಗೆಯಲಿ ಹರಿಯ ಮನದಲಿ ಒಲಿಸಿ ನಿಲ್ಲಿಸಿ,
ಏನು ಮಾಡುವ ಕೆಲಸಗಳು ಅವನಂಘ್ರಿ ಪೂಜೆಗಳೆಂದು ನೆನೆವುತಿರು,
ಹಲಧರಾನುಜ ತಾನೆ ಸರ್ವ ಸ್ಥಲಗಳಲಿ ನೆಲೆಸಿದ್ದು,
ನಿಶ್ಚಂಚಲ ಭಕುತಿ ಸುಜ್ಞಾನ ಭಾಗ್ಯವ ಕೊಟ್ಟು ಸಂತೈಪ ॥ ೨೮ ॥

ದೋಷಗಂಧವಿದೂರ, ನಾನಾ ವೇಷಧಾರಕ, ಈ ಜಗತ್ರಯ ಪೋಷಕ,
ಪುರಾತನ ಪುರುಷ, ಪುರುಹೂತ ಮುಖ ವಿನುತ,
ಶೇಷವರ ಪರಿಯಂಕ ಶಯನ, ವಿಭೀಷಣಪ್ರಿಯ, ವಿಜಯ ಸಖ,
ಸಂತೋಷ ಬಡಿಸುವ ಜನರಿಗಿಷ್ಟಾರ್ಥಗಳ ಪೂರೈಸಿ ॥ ೨೯ ॥

ಶ್ರೀಮಹೀಸೇವಿತಪದಾಂಬುಜ, ಭೂಮ ಸದ್ಭಕ್ತ್ಯೈಕ ಲಭ್ಯ,
ಪಿತಾಮಹಾದ್ಯಮರಾ ಸುರಾರ್ಚಿತ ಪಾದ ಪಂಕೇಜ,
ವಾಮವಾಮನ ರಾಮ, ಸಂಸಾರಾಮಯೌಷಧ, ಹೇ ಮಮ ಕುಲಸ್ವಾಮಿ ಸಂತೈಸೆನಲು,
ಬಂದೊದಗುವನು ಕರುಣಾಳು ॥ ೩೦ ॥

ದನುಜದಿವಿಜರೊಳಿದ್ದು ಅವರವರನುಸರಿಸಿ ಕರ್ಮಗಳ ಮಾಳ್ಪನು,
ಜನನಮರಣಾದ್ಯಖಿಳ ದೋಷವಿದೂರ ಎಮ್ಮೊಡನೆ ಜನಿಸುವನು–ಜೀವಿಸುವ–
ಸಂರಕ್ಷಣೆಯ ಮಾಡುವ ಎಲ್ಲ ಕಾಲದಿ,
ಧನವ ಕಾಯ್ದಿಹ ಸರ್ಪನಂತನಿಮಿತ್ತ ಬಾಂಧವನು ॥ ೩೧ ॥

ಬಿಸರುಹಾಪ್ತಾಗಸದಿ ತಾನುದಯಿಸಲು ವೃಕ್ಷಂಗಳ ನೆಳಲು ಪಸರಿಸುವವಿಳೆಯೊಳು–
ಅಸ್ತಮಿಸಲಲ್ಲಲ್ಲೆ ಲೀನಹವು,
ಶ್ವಸನಮುಖ್ಯ ಅಮರಾಂತರಾತ್ಮಕನ ವಶದೊಳಿರುತಿಪ್ಪವು ಈ ಜಗತ್ರಯ,
ಬಸಿರೊಳಿಂಬಿಟ್ಟಿಲ್ಲ ಕರ್ಮವ ತೋರ್ಪ ನೋಳ್ಪರಿಗೆ ॥ ೩೨ ॥

ತ್ರಿಭುವನೈಕಾರಾಧ್ಯ ಲಕ್ಷ್ಮೀ ಸುಭುಜಯುಗಳಾಲಂಗಿತಾಂಗ, ಸ್ವಭು,
ಸುಖಾತ್ಮ ಸುವರ್ಣವರ್ಣ ಸುಪರ್ಣವರವಹನ,
ಅಭಯದಾನಂತಾರ್ಕಶಶಿ ಸನ್ನಿಭ, ನಿರಂಜನ,
ನಿತ್ಯದಲಿ ತನಗಭಿನಮಿಸುವರಿಗೀವ ಸರ್ವಾರ್ಥಗಳ ತಡೆಯದಲೆ ॥ ೩೩ ॥

ಕವಿಗಳಿಂದಲಿ ತಿಳಿದು ಪ್ರಾತ: ಸವನ ಮಧ್ಯಂದಿನವು ಸಾಯಮ ಸವನಗಳ,
ವಸುರುದ್ರರಾದಿತ್ಯರೊಳು ರಾಜಿಸುವ ಪವನನೊಳು–
ಕೃತಿ ಜಯ ಸುಮಾಯಾಧವನ ಮೂರ್ತಿತ್ರಯವ ಚಿಂತಿಸಿ,
ದಿವಸವೆಂಬಾಹುತಿಗಳಿಂದರ್ಚಿಸುತ ಸುಖಿಸುತಿರು ॥ ೩೪ ॥

ಚತುರವಿಂಶತ್ಯಬ್ದ ವಸುದೇವತೆಗಳೊಳು ಪ್ರದ್ಯುಮ್ನನಿಪ್ಪನು,
ಚತುರಚತ್ವಾರಿಂಶತಿಗಳಲಿ ಸಂಕರುಷಣಾಖ್ಯ,
ಹುತವಹಾಕ್ಷನೊಳಿಹನು ಮಾಯಾಪತಿಯು ಹದಿನಾರಧಿಕ ದ್ವಾತ್ರಿಂಶತಿ–
ವರುಷಗಳಲಿಪ್ಪನಾದಿತ್ಯನೊಳು ಸಿತಕಾಯ ॥ ೩೫ ॥

ಷೋಡಶೋತ್ತರಶತ ವರುಷದಲಿ, ಷೋಡಶೋತ್ತರಶತ ಸುರೂಪದಿ,
ಕ್ರೀಡಿಸುವ ವಸುರುದ್ರರಾದಿತ್ಯರೊಳು ಸತಿಸಹಿತ,
ವ್ರೀಡವಿಲ್ಲದೆ ಭಜಿಪ ಭಕ್ತರ ಪೀಡಿಸುವ ದುರಿತೌಘಗಳ ದೂರೋಡಿಸುತ,
ಬಳಿಯಲಿ ಬಿಡದೆ ನೆಲೆಸಿಪ್ಪ ಭಯಹಾರಿ ॥ ೩೬ ॥

ಮೂರಧಿಕ ಎಂಭತ್ತು ಸಹಸ್ರೈನೂರ ಇಪ್ಪತ್ತೆನಿಪರೂಪದಿ,
ತೋರುತಿಪ್ಪ ದಿವಾನಿಶಾಧಿಪರೊಳಗೆ ನಿತ್ಯದಲಿ,
ಭಾರತೀ ಪ್ರಾಣರೊಳಗಿದ್ದು ನಿವಾರಿಸುತ ಭಕ್ತರ ದುರಿತ,
ಹಿಂಕಾರ–ನಿಧನ, ಪ್ರಥಮರೂಪದಿ ಪಿತೃಗಳನೆ ಪೊರೆವ ॥ ೩೭ ॥

ಬುದ್ಧಿಪೂರ್ವಕ ಉತ್ತಮೊತ್ತಮ ಶುದ್ಧ ಊರ್ಣಾಂಬರವ ಪಂಕದೊಳದ್ದಿ ತೆಗೆಯಲು,
ಲೇಪವಾಗುವದೇ ಪರೀಕ್ಷಿಸಲು,
ಪದ್ಮನಾಭನು ಸರ್ವಜೀವರೊಳಿದ್ದರೇನು ಗುಣತ್ರಯಗಳಿಂ ಬದ್ಧನಾಗುವನೇನೋ,
ನಿತ್ಯಸುಖಾತ್ಮ ಚಿನ್ಮಯನು ॥ ೩೮ ॥

ಸಕಲ ದೋಷವಿದೂರ, ಶಶಿ ಪಾವಕ ಸಹಸ್ರಾನಂತಸೂರ್ಯ ಪ್ರಕರ ಸನ್ನಿಭಗಾತ್ರ,
ಲಕುಮಿಕಳತ್ರ ಸುರಮಿತ್ರ ॥
ವಿಖನಸಾಂಡದೊಳಿಪ್ಪ ಬ್ರಹ್ಮಾದ್ಯಖಿಳ ಚೇತನಗಣಕೆ,
ತಾನೇ ಸಖನೆನಿಸಿಕೊಂಡು ಅಕುಟಿಲಾತ್ಮಕನಿಪ್ಪನವರಂತೆ ॥ ೩೯ ॥

ದೇಶಭೇದಗಳಲ್ಲಿ ಇಪ್ಪಾಕಾಶದೋಪಾದಿಯಲಿ,
ಚೇತನ ರಾಶಿಯೊಳು ನೆಲೆಸಿಪ್ಪನು, ಅವ್ಯವಧಾನದಲಿ ನಿರುತ,
ಶ್ರೀಸಹಿತ ಸರ್ವತ್ರದಿ ನಿರವಾಕಾಶ ಕೊಡುವಂದದಲಿ ಕೊಡುತ,
ನಿರಾಶೆಯಲಿ, ಸರ್ವಾಂತರಾತ್ಮಕ ಶೋಭಿಸುವ ಸುಖದ ॥ ೪೦ ॥

ಶ್ರೀವಿರಿಂಚಾದ್ಯಮರಗಣ ಸಂಸೇವಿತಾಂಘ್ರಿಸರೋಜ,
ಈ ಜಡ ಜೀವರಾಶಿಗಳೊಳಹೊರಗೆ ನೆಲೆಸಿದ್ದು ನಿತ್ಯದಲಿ,
ಸಾವಕಾಶನು ಎನಿಸಿ, ತನ್ನ ಕಳೇವರದೊಳಿಂಬಿಟ್ಟು ಸಲಹುವ,
ದೇವ ದೇವಕೀರಮಣ, ದಾನವಹರಣ ಜಿತಮರಣ ॥ ೪೧ ॥

ಮಾಸ ಒಂದಕೆ ಪ್ರತಿದಿವಸದಲಿ ಶ್ವಾಸಗಳು ಅಹವು,
ಅಷ್ಟ ಚತ್ವಾರಿಂಶತಿ ಸಹಸ್ರಾಧಿಕಾರು ಸುಲಕ್ಷಸಂಖ್ಯೆಯಲಿ,
ಹಂಸನಾಮಕ ಹರಿಯ ಷೋಡಶ ಈ ಶತಾಬ್ದದಿ ಭಜಿಸೆ ಒಲಿವ,
ದಯಾಸಮುದ್ರ ಕುಚೇಲಗೊಲಿದಂದದಲಿ ದಿನದಿನದಿ ॥ ೪೨ ॥

ಸ್ಥೂಲದೇಹದೊಳಿದ್ದು ವರುಷಕೆ ಏಳಧಿಕ ಎಪ್ಪತ್ತು ಲಕ್ಷದ ಮೇಲೆ–
ಎಪ್ಪತ್ತಾರುಸಾವಿರ ಶ್ವಾಸಜಪಗಳನು ಗಾಳಿದೇವನು ಕರುಣದಲಿ–
ಈರೇಳುಲೋಕದೊಳುಳ್ಳ ಚೇತನ ಜಾಲದೊಳು ಮಾಡುವನು,
ತ್ರಿಜಗದ್ವ್ಯಾಪ್ತ ಪರಮಾಪ್ತ ॥ ೪೩ ॥

ಈರೆರಡು ದೇಹಗಳೊಳಗಿದ್ದು ಸಮೀರದೇವನು ಶ್ವಾಸಜಪ ನಾನೂರಧಿಕವಾಗಿಪ್ಪ–
ಎಂಭತ್ತಾರುಸಾಹಸ್ರ ತಾ ರಚಿಸುವನು ದಿವಸ ಒಂದಕೆ–
ಮೂರುವಿಧ ಜೀವರೊಳಗಿದ್ದು,
ಖರಾರಿ ಕರುಣಾಬಲವದೆಂತುಟೊ ಪವನರಾಯನೊಳು ॥ ೪೪ ॥

ಶ್ರೀಧವ ಜಗನ್ನಾಥ ವಿಠಲ ತಾ ದಯದಿ ವದನದೊಳು ನುಡಿದೋಪಾದಿಯಲಿ,
ನಾ ನುಡಿದೆನಲ್ಲದೆ ಕೇಳಿ ಬುಧ ಜನರು,
ಸಾಧುಲಿಂಗಪ್ರದರ್ಶಕರು ನಿಷೇಧಗೈಸಿದರೇನಹುದು,
ಎನ್ನಪರಾಧವೇನಿದರೊಳಗೆ ಪೇಳ್ವುದು, ತಿಳಿದು ಕೋವಿದರು ॥ ೪೫ ॥

॥ ಇತಿ ಶ್ರೀ ನಾಡೀಪ್ರಕರಣ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀಃ ॥

## ॥ ೧೩. ಶ್ರೀ ನಾಮಸ್ಮರಣ ಸಂಧಿ ॥

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ,
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥

ಮಕ್ಕಳಾಡಿಸುವಾಗ, ಮಡದಿಯೊಳಕ್ಕರದಿ ನಗುವಾಗ,
ಹಯ ಪಲ್ಲಕ್ಕಿ ಗಜ ಮೊದಲಾದ ವಾಹನಗಳೇರಿ ಮೆರೆವಾಗ,
ಬಿಕ್ಕುವಾಗ, ಆಕಳಿಸುತಲಿ ದೇವಕ್ಕಿತನಯನ ಸ್ಮರಿಸುತಿಹ ನರ,
ಸಿಕ್ಕ ಯಮದೂತರಿಗೆ ಆವಾವಲ್ಲಿ ನೋಡಿದರು ॥ ೧ ॥

ಸರಿತುಪ್ರವಹಗಳಲ್ಲಿ, ದಿವ್ಯಾಂಬರದಿ, ಪತ್ರಾದಿಯಲಿ, ಹರುಷಾಮರುಷ-
ವಿಸ್ಮೃತಿಯಿಂದಲಾಗಲಿ ಒಮ್ಮೆ ಬಾಯ್ದೆರೆದು ಹರಿ ಹರೀ ಹರಿಯೆಂಬ-
ಎರಡಕ್ಷರ ನುಡಿದಮಾತ್ರದಲಿ,
ದುರಿತಗಳಿರದೆ ಪೋಪವು ತೂಲರಾಶಿಯೊಳನಲ ಪೊಕ್ಕಂತೆ ॥ ೨ ॥

ಮಲಗುವಾಗಲಿ, ಏಳುವಾಗಲಿ, ಕುಳಿತು ಮಾತಾಡುತಲಿ, ಮನೆಯೊಳು ಕೆಲಸಗಳ ಮಾಡುತಲಿ,
ಮೈದೊಳೆವಾಗ ಮೆಲುವಾಗ,
ಕಲುಷದೂರನ ಸಕಲ ಠಾವಿಲಿ ತಿಳಿಯೆ, ತತ್ತನ್ನಾಮರೂಪವ ಬಳಿಯಲಿಪ್ಪನು,
ಒಂದರಕ್ಷಣ ಬಿಟ್ಟಗಲನವರ ॥ ೩ ॥

ಆವ ಕುಲದವನಾದಡೇನು, ಇನ್ನಾವ ದೇಶದೊಳಿದ್ದಡೇನು,
ಇನ್ನಾವ ಕರ್ಮವ ಮಾಡಲೇನು, ಇನ್ನಾವ ಕಾಲದಲಿ,
ಶ್ರೀವರನ ಸರ್ವತ್ರದಲಿ ಸಂಭಾವಿಸುತ ಪೂಜಿಸುತ ಮೋದಿಪ-
ಕೋವಿದರಿಗುಂಟೇನೊ ಭಯ ದು:ಖಾದಿ ದೋಷಗಳು ॥ ೪ ॥

ವಾಸುದೇವನ ಗುಣಸಮುದ್ರದೊಳೀಸಬಲ್ಲವ,
ಭವಸಮುದ್ರಾಯಾಸವಿಲ್ಲದೆ ದಾಟುವನು ಶೀಘ್ರದಲಿ ಜಗದೊಳಗೆ,
ಬೇಸರದೆ ದುರ್ವಿಷಯುಗಳ ಅಭಿಲಾಷೆಯಲಿ ಬಳಲುವವ,
ನಾನಾ ಕ್ಲೇಷಗಳನನುಭವಿಪ ಭಕ್ತಿಸುಮಾರ್ಗ ಕಾಣದಲೆ ॥ ೫ ॥

ಸ್ನಾನ ಜಪ ದೇವಾರ್ಚನೆಯು, ವ್ಯಾಖ್ಯಾನ ಭಾರತ ಮುಖ ಮಹೋಪಪುರಾಣ ಕಥೆಗಳ-
ಪೇಳಿ ಕೇಳಿದರೇನು ದಿನದಿನದಿ,
ಜ್ಞಾನ ಕರ್ಮೇಂದ್ರಿಯಗಳಿಂದೇನೇನು ಮಾಡುವ ಕರ್ಮಗಳು,
ಲಕ್ಷ್ಮೀನಿವಾಸನ ಪೂಜೆಯೆಂದರ್ಪಿಸದ ಮಾನವನು ॥ ೬ ॥

ದೇವಗಂಗೆಯೊಳುಳ್ಳವಗೆ ದುರಿತಾವಳಿಗಳುಂಟೇ ವಿಚಾರಿಸೆ,
ಪಾವುಗಳ ಭಯವುಂಟೆ ವಿಹಗಾಧಿಪನ ಮಂದಿರದಿ,
ಜೀವಕರ್ತೃತ್ವವನು ಮರೆದು, ಪರಾವರೇಶನೇ ಕರ್ತೃ ಎಂದರಿದು,
ಆವ ಕರ್ಮವ ಮಾಡಿದರು ಲೇಪಿಸವು ಕರ್ಮಗಳು ॥ ೭ ॥

ಏನು ಮಾಡುವ ಪುಣ್ಯ ಪಾಪಗಳಾನೆ ಮಾಡುವೆನೆಂಬುವಾಧಮ,
ಹೀನಕರ್ಮಕೆ ಪಾತ್ರನಾ ಪುಣ್ಯಕ್ಕೆ ಹರಿಯೆಂಬ ಮಾನವನು ಮಧ್ಯಮನು,
ದ್ವಂದ್ವಕೆ ಶ್ರೀನಿವಾಸನೆ ಕರ್ತೃವೆಂದು ಸದಾನುರಾಗದಿ-
ನೆನೆದು ಸುಖಿಸುವರೇ ನರೋತ್ತಮರು ॥ ೮ ॥

ಈ ಉಪಾಸನೆಗೈವರಿಳೆಯೊಳು ದೇವತೆಗಳಲ್ಲದಲೆ ನರರಲ್ಲ,
ಆವಬಗೆಯಿಂದಾದರವರರ್ಚನೆಯು ಹರಿಪೂಜೆ,
ಕೇವಲ ಪ್ರತಿಮೆಗಳೆನಿಪರು ರಮಾವಿನೋದಿಗೆ,
ಇವರನುಗ್ರಹವೇ ವರಾನುಗ್ರಹವೆನಿಸುವುದು ಮುಕ್ತಿ ಯೋಗ್ಯರಿಗೆ ॥ ೯ ॥

ತನುವೆ ನಾನೆಂಬುವನು ಸತಿಸುತ ಮನೆ ಧನಾದಿಗಳೆನ್ನದೆಂಬುವ,
ದ್ಯುನದಿ ಮೊದಲಾದುದಕಗಳೆ ಸತ್ತೀರ್ಥವೆಂಬುವನು,
ಅನಲ ಲೋಹಾದಿ ಪ್ರತೀಕಾರ್ಚನವೆ ದೇವರಪೂಜೆ,
ಸುಜನರ ಮನುಜರಹುದೆಂಬುವನು ಗೋಖರನೆನಿಪ ಬುಧರಿಂದ ॥ ೧೦ ॥

ಅನಲಸೋಮಾರ್ಕೇಂದು ತಾರಾವನಿ ಸುರಾಪಗ ಮುಖ್ಯತೀರ್ಥಗಳು,
ಅನಿಲ ಗಗನಮನಾದಿ ಇಂದ್ರಿಯಗಳಿಗೆ ಅಭಿಮಾನಿ ಎನಿಪ ಸುರರು,
ವಿಪಶ್ಚಿತರ ಸನ್ಮನದಿ ಭಜಿಸದೆ ಯಿಪ್ಪರನ ಪಾವನವ ಮಾಡರು,
ತಮ್ಮ ಪೂಜೆಯ ಮಾಡಿದರು ಸರಿಯೆ ॥ ೧೧ ॥

ಕೆಂಡ ಕಾಣದೆ ಮುಟ್ಟಿದರು ಸರಿ ಕಂಡು ಮುಟ್ಟಲು ದಹಿಸದಿಪ್ಪುದೆ,
ಪುಂಡರೀಕದಳಾಯತಾಕ್ಷನ ವಿಮಲ ಪದಪದ್ಮ-
ಬಂಡುಣಿಗಳೆಂದೆನಿಪ ಭಕ್ತರ ಹಿಂಡುನೋಡಿದ ಮಾತ್ರದಲಿ,
ತನುದಿಂಡು ಗೆಡಹಿದ ನರನ ಪಾವನಮಾಳ್ಪರಾಕ್ಷಣದಿ ॥ ೧೨ ॥

ಈ ನಿಮಿತ್ತ ಪುನಃ ಪುನಃ ಸುಜ್ಞಾನಿಗಳ ಸಹವಾಸ ಮಾಡು,
ಕುಮಾನವರ ಕೂಡಾಡದಿರು ಲೌಕಿಕಕೆ ಮರುಳಾಗಿ,
ವೈನತೇಯಾಂಸಗನ ಸರ್ವ ಸ್ಥಾನದಲಿ ತನ್ನಾಮರೂಪವ ಧೇನಿಸುತ ಸಂಚರಿಸು,
ಇತರಾಲೋಚನೆಯ ಬಿಟ್ಟು ॥ ೧೩ ॥

ಈ ನಳಿನಜಾಂಡದೊಳು ಸರ್ವ ಪ್ರಾಣಿಗಳೊಳಗಿದ್ದನವರತ-
ವಿಜ್ಞಾನಮಯ ವ್ಯಾಪಾರಗಳ ಮಾಡುವನು ತಿಳಿಸದಲೆ,
ಏನು ಕಾಣದೆ ಸಕಲ ಕರ್ಮಗಳಾನೆ ಮಾಡುವೆನೆಂಬ ನರನು ಕುಯೋನಿ ಐದುವ,
ಕರ್ತೃ ಹರಿ ಎಂದವನೆ ಮುಕ್ತನಹ ॥ ೧೪ ॥

ಕಲಿಮಲಾಪಹಳೆನಿಸುತಿಹ ಬಾಂಬೊಳೆಯೊಳಗೆ ಸಂಚರಿಸಿ ಬದಕುವ-
ಜಲಚರಪ್ರಾಣಿಗಳು ಬಲ್ಲವೆ ತೀರ್ಥಮಹಿಮೆಯುನು,
ಹಲವು ಬಗೆಯಲಿ ಹರಿಯ ಕರುಣಾಬಲದಿ ಬಲ್ಲಿದರಾದ-
ಬ್ರಹ್ಮಾನಿಲವಿಪೇಶಾದ್ಯಮರರು ಅರಿಯರನಂತನಮಲಗುಣ ॥ ೧೫ ॥

ಶ್ರೀಲಕುಮಿವಲ್ಲಭನು ಹೃತ್ಕೀಲಾಲಜದೊಳಿದ್ದಖಿಳ ಚೇತನ ಜಾಲವನು ಮೋಹಿಸುವ-
ತ್ರಿಗುಣದಿ ಬದ್ಧರನು ಮಾಡಿ,
ಸ್ಥೂಲಕರ್ಮಾದಿ ರತರ ಮಾಡಿ ಸ್ವಲೀಲೆಗಳ ತಿಳಿಸದಲೆ ಭವದಿ-
ಕುಲಾಲಚಕ್ರದ ತೆರದಿ ತಿರುಗಿಸುತಿಹನು ಮಾನವರ ॥ ೧೬ ॥

ವೇದಶಾಸ್ತ್ರ ವಿಚಾರಗೈದು ನಿಷೇಧ ಕರ್ಮವ ತೊರೆದು-
ನಿತ್ಯದಿ ಸಾಧು ಕರ್ಮವ ಮಾಳ್ಪರಿಗೆ ಸ್ವರ್ಗಾದಿಸುಖವೀವ ॥
ಐದಿಸುವ ಪಾಪಿಗಳ ನಿರಯುವ, ಖೇದವೋದ ಮನುಷ್ಯರಿಗೆ,
ದುರ್ವಾದಿಗಳಿಗಂಧಂತಮದಿ ಮಹದು:ಖಗಳನುಣಿಪ ॥ ೧೭ ॥

ನಿರ್ಗುಣೋಪಾಸಕಗೆ ಗುಣಸಂಸರ್ಗದೋಷಗಳೀಯದಲೆ,
ಅಪವರ್ಗದಲಿ ಸುಖವಿತ್ತು ಪಾಲಿಸುವನು ಕೃಪಾಸಾಂದ್ರ,
ದುರ್ಗಮನು ಎಂದೆನಿಪ ತ್ರೈವಿಧ್ಯರ್ಗೆ, ತ್ರಿಗುಣಾತೀತ,
ಸಂತತ ಸ್ವರ್ಗಭೂನರಕದಲಿ ಸಂಚಾರವನೆ ಮಾಡಿಸುವ ॥ ೧೮ ॥

ಮೂವರೊಳಗಿದ್ದರು ಸರಿಯೆ ಸುಖನೋವುಗಳು ಸಂಬಂಧವಾಗವು,
ಪಾವನಕೆ ಪಾವನ ಪರಾತ್ಪರ ಪೂರ್ಣಸುಖವನಧಿ,
ಈ ವನರುಹಭವಾಂಡದೊಳು ಸ್ವಕಳೇವರ ತದಾಕಾರಮಾಡಿ,
ಪರಾವರೇಶ ಚರಾಚರಾತ್ಮಕ ಲೋಕಗಳ ಪೊರೆವ ॥ ೧೯ ॥

ಈ ನಿಮಿತ್ತ ನಿರಂತರ ಸ್ವಾಧೀನಕರ್ತೃತ್ವವನು ಮರೆದು,
ಏನೇನು ಮಾಡುವದೆಲ್ಲ ಹರಿ ಒಳಹೊರಗೆ ನೆಲೆಸಿದ್ದು ತಾನೆ ಮಾಡುವನೆಂದು-
ಮದ್ದಾನೆಯಂದದಿ ಸಂಚರಿಸು,
ಪವಮಾನವಂದಿತ ಒಂದರಕ್ಷಣ ಬಿಟ್ಟಗಲ ನಿನ್ನ ॥ ೨೦ ॥

ಹಲವು ಕರ್ಮವ ಮಾಡಿ ದೇಹವ ಬಳಲಿಸದೆ ದಿನದಿನದಿ,
ಹೃದಯುಕಮಲಸದನದಿ ವಿರಾಜಿಸುವ ಹರಿಮೂರ್ತಿಯನೆ ಭಜಿಸು,
ತಿಳಿಯದೀ ಪೂಜಾಪ್ರಕರಣವ ಫಲಸುಪುಷ್ಪಾಗ್ರೋದಕ ಶ್ರೀ ತುಲಸಿಗಳನರ್ಪಿಸಲು,
ಒಪ್ಪನು ವಾಸುದೇವ ಸದಾ ॥ ೨೧ ॥

ಧರಣಿ ನಾರಾಯಣನು, ಉದಕದಿ ತುರಿಯನಾಮಕ,
ಅಗ್ನಿಯೊಳು ಸಂಕರುಷಣಾಹ್ವಯ, ವಾಯುಗನು ಪ್ರದ್ಯುಮ್ನ,
ಅನಿರುದ್ಧ ಇರುತಿಹನು ಆಕಾಶದೊಳು, ಮೂರೆರಡು ರೂಪವ ಧರಿಸಿ ಭೂತಗ ಕರೆಸುವನು,
ತನ್ನಾಮರೂಪದಿ ಪ್ರಜರ ಸಂತೈಪ ॥ ೨೨ ॥

ಘನಗತನು ತಾನಾಗಿ ನಾರಾಯಣನು ತನ್ನಾಮದಲಿ ಕರೆಸುತ,
ವನದ ಗರ್ಭೋದಕದಿ ನೆಲೆಸಿಹ ವಾಸುದೇವಾಖ್ಯ,
ಧ್ವನಿಸಿಡಿಲು ಸಂಕರುಷಣನು, ಮಿಂಚಿನೊಳು ಶ್ರೀಪ್ರದ್ಯುಮ್ನ,
ವೃಷ್ಟಿಯ ಹನಿಗಳೊಳಗನಿರುದ್ಧನಿಪ್ಪನು ವರುಷನೆಂದೆನಿಸಿ ॥ ೨೩ ॥

ಗೃಹಕುಟುಂಬ ಧನಾದಿಗಳ ಸನ್ನಹಗಳುಳ್ಳವರಾಗಿ,
ವಿಹಿತಾವಿಹಿತ ಧರ್ಮ ಸುಕರ್ಮಗಳ ತಿಳಿಯದಲೆ ನಿತ್ಯದಲಿ,
ಅಹರ ಮೈಥುನ ನಿದ್ರೆಗೊಳಗಾಗಿಹರು ಸರ್ವಪ್ರಾಣಿಗಳು,
ಹೃದ್ಗುಹನಿವಾಸಿಯನರಿಯದಲೆ ಭವದೊಳಗೆ ಬಳಲುವರು ॥ ೨೪ ॥

ಜಡಜಸಂಭವ ಖಗ ಫಣಿಪ ಕೆಂಜೆಡೆಯರಿಂದೊಡಗೂಡಿ ರಾಜಿಸುತ-
ಅಡವಿಯೊಳಗಿಪ್ಪನು ಸದಾ ಗೋಜಾದ್ರಿಜನು ಎನಿಸಿ,
ಉಡುಪನಿಂದಭಿವೃದ್ಧಿಗಳ ತಾ ಕೊಡುತ,
ಪಕ್ಷಿ ಮೃಗಾಹಿಗಳ ಕಾರೊಡಲ ಕಾವನು, ತತ್ತದಾಹ್ವಯನಾಗಿ ಜೀವರನ ॥ ೨೫ ॥

ಅಪರಿಮಿತಸನ್ಮಹಿಮ ನರಹರಿ ವಿಪಿನದೊಳು ಸಂತೈಸುವನು,
ಕಾಶ್ಯಪಿಯನಳಿದವ ಸ್ಥಲಗಳಲಿ, ಸರ್ವತ್ರ ಕೇಶವನು,
ಖಪತಿ ಗಗನದಿ, ಜಲಗಳಲಿ ಮಹಶಫರನಾಮಕ,
ಭಕ್ತರನು ನಿಷ್ಕಪಟದಿಂದಲಿ ಸಲಹುವನು ಕರುಣಾಳು ದಿನದಿನದಿ ॥ ೨೬ ॥

ಕಾರಣಾಂತರ್ಯಾಮಿ ಸ್ಥೂಲವತಾರ ವ್ಯಾಪ್ತಾಂಶಾದಿರೂಪಕೆ-
ಸಾರ ಶುಭಪ್ರವಿವಿಕ್ತನಂದ ಸ್ಥೂಲ ನಿಸ್ಸಾರ,
ಆರು ರಸಗಳನು ಅರ್ಪಿಸಿ-ಅಲ್ಪರಿಗೆ ಈ ರಹಸ್ಯವ ಪೇಳದೆ,
ಸದಾಪಾರಮಹಿಮನ ರೂಪಗುಣಗಳ ನೆನೆದು ಸುಖಿಸುತಿರು ॥ ೨೭ ॥

ಜಲಗತೋಡುಪನಮಲ ಬಿಂಬವ ಮೆಲುವೆವೆಂಬತಿ ಹರುಷದಿಂದಲಿ-
ಜಲಚರಪ್ರಾಣಿಗಳು ನಿತ್ಯದಿ ಯತ್ನಗೈವಂತೆ,
ಹಲಧರಾನುಜ ಭೋಗ್ಯರಸಗಳ ನೆಲೆಯನರಿಯದೆ ಪೂಜಿಸುತ,
ಹಂಬಲಿಸುವರು ಪುರುಷಾರ್ಥಗಳ ಸತ್ಕುಲಜರಾವೆಂದು ॥ ೨೮ ॥

ದೇವ ಋಷಿ ಗಂಧರ್ವ ಪಿತೃ ನರ ದೇವ ಮಾನವ ದನುಜ ಗೋಜ ಖರಾವಿ-
ಮೊದಲಾದಖಿಳ ಚೇತನ ಭೋಗ್ಯರಸಗಳನು,
ಯಾವದವಯವಗಳೊಳಗಿದ್ದು ರಮಾವರನು ಸ್ವೀಕರಿಪ,
ಯಾವಜ್ಜೀವಗಣಕೆ ಸ್ವಯೋಗ್ಯರಸಗಳನೀವನೆಂದೆಂದು ॥ ೨೯ ॥

ಒರಟು ಬುದ್ಧಿಯ ಬಿಟ್ಟು ಲೌಕಿಕ ಹರಟೆಗಳ ನೀಡಾಡಿ,
ಕಾಂಚನ ಪರಟಿಲೋಷ್ಟಾದಿಗಳು ಸಮವೆಂದರಿದು ನಿತ್ಯದಲಿ,
ಪುರುಟಗರ್ಭಾಂಡೋದರನು ಸತ್ಪುರುಷನೆಂದೆನಿಸೆಲ್ಲರೊಳಗಿದ್ದು,
ಉರುಟ ಕರ್ಮವ ಮಾಳ್ಪನೆಂದಡಿಗಡಿಗೆ ನೆನೆವುತಿರು ॥ ೩೦ ॥

ಭೂತಳದಿ ಜನರುಗಳು ಮರ್ಮಕ ಮಾತುಗಳನಾಡಿದರೆ ಸಹಿಸದೆ,
ಘಾತಿಸುವರತಿಕೋಪದಿಂದಲಿ ಎಚ್ಚರಿಪ ತೆರದಿ,
ಮಾತುಳಾಂತಕ ಜಾರ ಹೇ ನವನೀತ ಚೋರನೇ ಎನಲು,
ತನ್ನ ನಿಕೇತನದೊಳಿಟ್ಟವರ ಸಂತೈಸುವನು ಕರುಣಾಳು ॥ ೩೧ ॥

ಹರಿಕಥಾಮೃತಸಾರವಿದು ಸಂತರು ಸದಾ ಚಿತ್ತೈಸುವುದು,
ನಿಷ್ಠುರಿಗಳಿಗೆ ಪಿಶುನರಿಗಯೋಗ್ಯರಿಗಿದನು ಪೇಳದಲೆ,
ನಿರುತ ಸದ್ಭಕ್ತಿಯಲಿ ಭಗವಚ್ಚರಿತೆಗಳ ಕೊಂಡಾಡಿ ಹಿಗ್ಗುವ ಪರಮ ಭಗವದ್ದಾಸರಿಗೆ,
ತಿಳಿಸುವುದು ಈ ರಹಸ್ಯ ॥ ೩೨ ॥

ಸತ್ಯಸಂಕಲ್ಪನು ಸದಾ ಏನಿತ್ತುದೇ ಪುರುಷಾರ್ಥವೆಂದರಿದು,
ಅತ್ಯಧಿಕ ಸಂತೋಷದಿಂ ನೆನೆವುತ್ತ ಭುಂಜಿಪುದು,
ನಿತ್ಯ ಸುಖ ಸಂಪೂರ್ಣ ಪರಮ ಸುಹೃತ್ತಮ ಜಗನ್ನಾಥ ವಿಠಲ,
ಬತ್ತಿಸಿ ಭವಾಂಬುಧಿಯ ಚಿತ್ಸುಖವ್ಯಕ್ತಿ ಕೊಡುತಿಪ್ಪ ॥ ೩೩ ॥

॥ ಇತಿ ಶ್ರೀ ನಾಮಸ್ಮರಣ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

## ॥ ೧೪. ಶ್ರೀ ಪಿತೃಗಣ ಸಂಧಿ ॥
## ॥ ೧೪. ಶ್ರೀ ಜೀವನಪ್ರಕ್ರಿಯಾ ಸಂಧಿ ॥

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ,
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥

ಕೃತಿರಮಣ ಪ್ರದ್ಯುಮ್ನ ವಸುದೇವತೆಗಳಾಹಂಕಾರತ್ರಯದೊಳು–
ಚತುರವಿಂಶತಿ ರೂಪದಿಂದಲಿ ಭೋಜ್ಯನೆನಿಸುವನು,
ಹುತವಹಾಕ್ಷಾಂತರ್ಗತ ಜಯಾಪತಿಯು ತಾನೇ ಮೂರಧಿಕ ತ್ರಿಂಶತಿ ಸುರೂಪದಿ–
ಭೋಕ್ತೃ ಎನಿಸುವ ಭೋಕ್ತೃಗಳೊಳಿದ್ದು ॥ ೧ ॥

ಆರಧಿಕ ಮೂವತ್ತು ರೂಪದಿ ವಾರಿಜಾಪ್ತನೊಳಿರುತಿಹನು-
ಮಾಯಾರಮಣ ಶ್ರೀವಾಸುದೇವನು ಕಾಲನಾಮದಲಿ,
ಮೂರುವಿಧ ಪಿತೃಗಳೊಳು ವಸು ತ್ರಿಪುರಾರಿ ಆದಿತ್ಯಗನಿರುದ್ಧನು,
ತೋರಿಕೊಳ್ಳದೆ ಕರ್ತೃ ಕರ್ಮ ಕ್ರಿಯನೆನಿಸಿಕೊಂಬ ॥ ೨ ॥

ಸ್ವವಶ ನಾರಾಯಣನು ತಾ ಷಣ್ಣವತಿನಾಮದಿ ಕರೆಸುತಲಿ,
ವಸುಶಿವ ದಿವಾಕರ ಕರ್ತೃ ಕರ್ಮ ಕ್ರಿಯೆಗಳೊಳಗಿದ್ದು,
ನೆವನವಿಲ್ಲದೆ ನಿತ್ಯದಲಿ ತನ್ನವರು ಮಾಡುವ ಸೇವೆ ಕೈಕೊಂಡು,
ಅವರ ಪಿತೃಗಳಿಗೀವನನಂತಾನಂತ ಸುಖಗಳನು ॥ ೩ ॥

ತಂತು ಪಟದಂದದಲಿ ಲಕ್ಷ್ಮೀಕಾಂತ ಪಂಚಾತ್ಮಕನೆನಿಸಿ,
ವಸು ಕಂತುಹರ ರವಿ ಕರ್ತೃಗಳೊಳಿದ್ದು,
ಅನವರತ ತನ್ನ ಚಿಂತಿಸುವ ಸಂತರನು ಗುರು ಮಧ್ವಾಂತರಾತ್ಮಕ ಸಂತಯಿಸುವನು,
ಸಂತತಖಿಳಾರ್ಥಗಳ ಪಾಲಿಸಿ ಇಹಪರಂಗಳಲಿ ॥ ೪ ॥

ತಂದೆ ತಾಯ್ಗಳ ಪ್ರೀತಿಗೋಸುಗ ನಿಂದ್ಯಕರ್ಮವ ತೊರೆದು-
ವಿಹಿತಗಳೊಂದು ಮೀರದೆ ಸಾಂಗಕರ್ಮಗಳನಾಚರಿಸುವವರು,
ವಂದನೀಯರಾಗಿಳೆಯೊಳಗೆ ದೈನಂದಿನದಿ ದೈಶಿಕ ದೈಹಿಕ ಸುಖದಿಂದ ಬಾಳ್ವರು,
ಬಹು ದಿವಸದಲಿ ಕೀರ್ತಿಯುತರಾಗಿ ॥ ೫ ॥

ಅಂಶಿ ಅಂಶಾಂತರ್ಗತತ್ರಯ ಹಂಸ ವಾಹನ ಮುಖ್ಯದಿವಿಜರ ಅಸಂಶಯದಿ ತಿಳಿದು,
ಅಂತರಾತ್ಮಕ ಶ್ರೀಜನಾರ್ದನನ ಸಂಸ್ಮರಣೆ ಪೂರ್ವಕದಿ,
ಷಡಧಿಕ ತ್ರಿಂಶತಿತ್ರಯರೂಪವರಿತು ವಿಪಾಂಸಗನ ಪೂಜಿಸುವರು,
ಅವರೆ ಕೃತಾರ್ಥರೆನಿಸುವರು ॥ ೬ ॥

ಮೂರುವರೆಸಾವಿರದ ಮೇಲರೆನೂರ್ಕೈದು ರೂಪದಿ ಜನಾರ್ದನ,
ಸೂರಿಗಳು ಮಾಡುವ ಸಮಾರಾಧನೆಗೆ ವಿಘ್ನಗಳು ಬಾರದಂತೆ ಬಹುಪ್ರಕಾರ-
ಖರಾರಿ ಕಾಪಾಡುವನು,
ಸರ್ವ ಶರೀರಗಳೊಳಿದ್ದವರವರ ಪೆಸರಿಂದ ಕರೆಸುತಲಿ ॥ ೭ ॥

ಜಯಜಯ ಜಯಾಕಾಂತ-ದತ್ತಾತ್ರಯ-ಕಪಿಲ-ಮಹಿದಾಸ-ಭಕ್ತಪ್ರಿಯ-
ಪುರಾತನ ಪುರುಷ-ಪೂರ್ಣಾನಂದ-ಮಾನಘನ-
ಹಯವದನ-ಹರಿ-ಹಂಸ-ಲೋಕತ್ರಯ ವಿಲಕ್ಷಣ-
ನಿಖಿಳ ಜಗದಾಶ್ರಯ-ನಿರಾಮಯ, ದಯದಿ ಸಂತೈಸೆಂದು ಪ್ರಾರ್ಥಿಪುದು ॥ ೮ ॥

ಷಣ್ಣವತಿಯೆಂಬಕ್ಷರೇಢ್ಯನು ಷಣ್ಣವತಿ ನಾಮದಲಿ ಕರೆಸುತ,
ತನ್ನವರು ಸದ್ಭಕ್ತಿ ಪೂರ್ವಕದಿಂದ ಮಾಡುತಿಹ ಪುಣ್ಯಕರ್ಮವ ಸ್ವೀಕರಿಸಿ,
ಕಾರುಣ್ಯಸಾಗರ ಸಲಹುವನು,
ಬ್ರಹ್ಮಣ್ಯದೇವ ಭವಾಬ್ಧಿಪೋತ ಬಹುಪ್ರಕಾರದಲಿ ॥ ೯ ॥

ದೇಹಗಳ ಕೊಡುವವನು ಅವರವರಹರಗಳ ಕೊಡದಿಹನೆ,
ಸುಮನಸ ಮಹಿತ ಮಂಗಳಚರಿತ ಸದ್ಗುಣಭರಿತನನವರತ,
ಅಹಿಕ ಪಾರತ್ರಿಕ ಸುಖಪ್ರದ, ವಹಿಸಿ ಬೆನ್ನಿಲಿ ಬೆಟ್ಟವ–
ಅಮೃತವ ದ್ರುಹಿಣ ಮೊದಲಾದವರಿಗುಣಿಸಿದ ಮುರಿದನಹಿತರನ ॥ ೧೦ ॥

ದ್ರುಹಿಣ ಮೊದಲಾದಮರರಿಗೆ ಸನ್ಮಹಿತ, ಮಾಯಾರಮಣ,
ತಾನೇ ಸ್ವಹನೆನಿಸಿ ಸಂತೃಪ್ತಿಬಡಿಸುವ ಸರ್ವಕಾಲದಲಿ,
ಪ್ರಹಿತ ಸಂಕರುಷಣನು ಪಿತೃಗಳಿಗಹರನೆನಿಪ ಸ್ವಧಾಖ್ಯರೂಪದಿ,
ಮಹಿಜ ಫಲತೃಣ ಪೆಸರಿನಲಿ ಪ್ರದ್ಯುಮ್ನ ಅನಿರುದ್ಧ ॥ ೧೧ ॥

ಅನ್ನನೆನಿಸುವ ನೃಪಶುಗಳಿಗೆ ಹಿರಣ್ಯಗರ್ಭಾಂಡದೊಳು,
ಸಂತತ ತನ್ನನೀಪರಿಯಿಂದುಪಾಸನೆ ಗೈವ ಭಕ್ತರನ–
ಬನ್ನಬಡಿಸದೆ ಭವಸಮುದ್ರ ಮಹೋನ್ನತಿಯ ದಾಟಿಸಿ,
ಚತುರ್ವಿಧ ಅನ್ನಮಯನಾತ್ಮ ಪ್ರದರ್ಶನ ಸುಖವನೀವ ಹರಿ ॥ ೧೨ ॥

ಮನವಚನಕಾಯಗಳ ದೆಶೆಯಿಂದನುದಿನದಿ ಬಿಡದಾಚರಿಸುತಿಪ್ಪ–
ಅನುಚಿತೋಚಿತ ಕರ್ಮಗಳ ಸದ್ಭಕ್ತಿಪೂರ್ವಕದಿ–
ಅನಿಲದೇವನೊಳಿಪ್ಪ ನಾರಾಯಣಗಿದನ್ನವು ಎಂದು ಕೃಷ್ಣಾರ್ಪಣವೆನುತ ಕೊಡು,
ಸ್ವೀಕರಿಸಿ ಸಂತೈಪ ಕರುಣಾಳು ॥ ೧೩ ॥

ಏಳು ವಿಧ ಅನ್ನ ಪ್ರಕರಣವ ಕೇಳಿ ಕೋವಿದರಾಸ್ಯದಿಂದಲಿ,
ಆಲಸವ ಮಾಡದಲೆ ಅನಿರುದ್ಧಾದಿ ರೂಪಗಳ ಕಾಲಕಾಲದಿ ನೆನೆದು ಪೂಜಿಸು–
ಸ್ಥೂಲಮತಿಗಳಿಗಿದನು ಪೇಳದೆ,
ಶ್ರೀಲಕುಮಿವಲ್ಲಭನೆ ಅನ್ನಾದನ್ನ ಅನ್ನದನು ॥ ೧೪ ॥

ಎಂದರಿದು ಸಪ್ತಾನ್ನಗಳ ದೈನಂದಿನದಿ ಮರೆಯದೆ ಸದಾ ಗೋವಿಂದಗರ್ಪಿಸು–
ನಿರ್ಭಯದಿ ಮಹಯಜ್ಞವಿದುಯೆಂದು,
ಇಂದಿರೇಶನು ಸ್ವೀಕರಿಸಿ ದಯದಿಂದ ಬೇಡಿಸಿಕೊಳದೆ ತವಕದಿ ತಂದು ಕೊಡುವನು,
ಪರಮ ಮಂಗಳ ತನ್ನ ದಾಸರಿಗೆ ॥ ೧೫ ॥

ಸೂಜಿ ಕರದಲಿ ಪಿಡಿದು ಸಮರವ ನಾ ಜಯಿಸುವೆನು ಎಂಬ ನರನಂತೆ,
ಈ ಜಗತ್ತಿನೊಳುಳ್ಳ ಅಜ್ಞಾನಿಗಳು ನಿತ್ಯದಲಿ,
ಶ್ರೀಜಗತ್ಪತಿ ಚರಣಯುಗಳ ಸರೋಜ ಭಕ್ತಿಜ್ಞಾನ ಪೂರ್ವಕ ಪೂಜಿಸದೆ,
ಧರ್ಮಾರ್ಥಕಾಮವ ಬಯಸಿ ಬಳಲುವರು ॥ ೧೬ ॥

ಶಕಟಭಂಜನ, ಸಕಲ ಜೀವರ ನಿಕಟಗನು ತಾನಾಗಿ ಲೋಕಕೆ ಪ್ರಕಟನಾಗದೆ-
ಸಕಲ ಕರ್ಮವ ಮಾಡಿ ಮಾಡಿಸುತ,
ಅಕುಟಿಲಾತ್ಮಕ ಭಕುತ ಜನರಿಗೆ ಸುಖದನೆನಿಸುವ ಸರ್ವಕಾಲದಿ,
ಅಕಟಕಟ ಈತನ ಮಹಾಮಹಿಮೆಗಳಿಗೇನೆಂಬೆ ॥ ೧೭ ॥

ಶ್ರೀಲಕುಮಿವಲ್ಲಭನು ವೈಕುಂಠಾಲಯದಿ,
ಪ್ರಣವ ಪ್ರಕೃತಿ ಕೀಲಾಲಜಾಸನ ಮುಖ್ಯ ಚೇತನರೊಳಗೆ ನೆಲೆಸಿದ್ದು,
ಮೂಲಕಾರಣ ಅಂಶಿನಾಮದಿ ಲೀಲೆಗೈಸುತ ತೋರಿಕೊಳ್ಳದೆ,
ಪಾಲಿನೊಳು ಘೃತವಿದ್ದತೆರದಂತಿಪ್ಪ ತ್ರಿಸ್ಥಳದಿ ॥ ೧೮ ॥

ಮೂರುಯುಗದಲಿ ಮೂಲರೂಪನು ಸೂರಿಗಳ ಸಂತೈಸಿ,
ದಿತಿಜ ಕುಮಾರಕರ ಸಂಹರಿಸಿ ಧರ್ಮವನುಳುಹಬೇಕೆಂದು,
ಕಾರುಣಿಕ ಭೂಮಿಯೊಳು ನಿಜಪರಿವಾರಸಹಿತವತರಿಸಿ-
ಬಹುವಿಧ ತೋರಿದನು ನರವತ್ಪ್ರವೃತ್ತಿಯ, ಸಕಲ ಚೇತನಕೆ ॥ ೧೯ ॥

ಕಾರಣಾಹ್ವಯ ಪ್ರಕೃತಿಯೊಳಗಿದ್ದಾರಧಿಕ ಹದಿನೆಂಟು ತತ್ತ್ವವ ತಾರಚಿಸಿ,
ತದ್ರೂಪ ತನ್ನಾಮಂಗಳನೆ ಧರಿಸಿ,
ನೀರಜ ಭವಾಂಡವನು ನಿರ್ಮಿಸಿ, ಕಾರುಣಿಕ ಕಾರ್ಯಾಖ್ಯ ರೂಪದಿ ತೋರುವನು,
ಸಹಜಾಹಿತಾಚಲಗಳಲಿ ಪ್ರತಿದಿನದಿ ॥ ೨೦ ॥

ಜೀವರಂತರ್ಯಾಮಿ ಅಂಶಿ, ಕಳೇವರಗಳೊಳಗಿಂದ್ರಿಯಗಳಲಿ-
ತಾ ವಿಹಾರವ ಗೈವುತನುದಿನ ಅಂಶನಾಮದಲಿ,
ಈ ವಿಷಯಗಳನುಂಡು ಸುಖಮಯ ಈವ ಸುಖ ಸಂಸಾರ ದು:ಖವ,
ದೇವ ಮಾನವ ದಾನವರಿಗವಿರತ ಸುಧಾಮಸಖ ॥ ೨೧ ॥

ದೇಶದೇಶವ ಸುತ್ತಿ ದೇಹಾಯಾಸಗೊಳಿಸದೆ, ಕಾಮ್ಯಕರ್ಮದುರಾಶೆಗೊಳಗಾಗದಲೆ,
ಬ್ರಹ್ಮಾದ್ಯಖಿಳ ಚೇತನರು-
ಭೂ ಸಲಿಲ ಪಾವಕ ಸಮೀರಾಕಾಶ ಮೊದಲಾದಖಿಳ ತತ್ತ್ವ
ಪರೇಶಗಿವಧಿಷ್ಠಾನವೆಂದರಿತರ್ಚಿಸನವರತ ॥ ೨೨ ॥

ಎರಡು ವಿಧದಲಿ ಲೋಕದೊಳು ಜೀವರುಗಳಿಪ್ಪರು ಸಂತತ,
ಕ್ಷರಾಕ್ಷರ–ವಿಲಿಂಗ ಸಲಿಂಗ–ಸೃಜ್ಯಾಸೃಜ್ಯ ಭೇದದಲಿ,
ಕರೆಸುವದು ಜಡಪ್ರಕೃತಿ ಪ್ರಣವಾಕ್ಷರ ಮಹದಣುಕಾಲನಾಮದಿ, ।
ಹರಿಸಹಿತ ಭೇದಗಳ ಪಂಚಕ ಸ್ಮರಿಸುಸರ್ವತ್ರ ॥ ೨೩ ॥

ಜೀವಜೀವರ ಭೇದ, ಜಡಜಡ, ಜೀವಜಡಗಳ ಭೇದ,
ಪರಮನು ಜೀವಜಡ ಸುವಿಲಕ್ಷಣನು, ಎಂದರಿದು ನಿತ್ಯದಲಿ,
ಈ ವಿರಿಂಚಾಂಡದೊಳು ಎಲ್ಲಾ ಠಾವಿನಲಿ ತಿಳಿದ್ಯೈದು ಭೇದ,
ಕಳೇವರದೊಳರಿತಚ್ಯುತನ ಪದ ವೈದು ಶೀಘ್ರದಲಿ ॥ ೨೪ ॥

ಆದಿಯಲ್ಲಿ ಕ್ಷರಾಕ್ಷರಾಖ್ಯದ್ವೇಧ, ಅಕ್ಷರದೊಳು ರಮಾಮಧುಸೂದನರು,
ಕ್ಷರಗಳೊಳು ಪ್ರಕೃತಿ ಪ್ರಣವಕಾಲಗಳು–
ವೇಧಮುಖ್ಯ ತೃಣಾಂತ ಜೀವರ ಭೇದಗಳನರಿತೀ ರಹಸ್ಯವ ಬೋಧಿಸದೆ ಮಂದರಿಗೆ,
ಸರ್ವತ್ರದಲಿ ಚಿಂತಿಪುದು ॥ ೨೫ ॥

ದೀಪದಿಂ ದೀಪಗಳು ಪೊರಮಟ್ಟಾಪಣಾಲಯುಗಳ ತಿಮಿರಗಳ ತಾ ಪರಿಹರ ಗೈಸಿ–
ತದ್ಗತ ಪದಾರ್ಥ ತೋರ್ಪಂತೆ,
ಸೌಪರಣಿ ವರವಹನು ತಾ ಬಹು ರೂಪನಾಮದಿ ಎಲ್ಲ ಕಡೆಯಲಿ ವ್ಯಾಪಿಸಿದ್ದು,
ಯಥೇಷ್ಟ ಮಹಿಮೆಯ ತೋರ್ಪ ತಿಳಿಸದಲೆ ॥ ೨೬ ॥

ನಳಿನಮಿತ್ರಗೆ ಇಂದ್ರಧನು ಪ್ರತಿ ಫಲಿಸುವಂತೆ,
ಜಗತ್ರಯವು ಕಂಗೊಳಿಪದನುಪಾಧಿಯಲಿ ಪ್ರತಿಬಿಂಬಾಹ್ವಯದಿ ಹರಿಗೆ,
ತಿಳಿಯೆ ತ್ರಿಕಕುದ್ಧಾಮನತಿಮಂಗಳ ಸುರೂಪವ ಸರ್ವ ಠಾವಿಲಿ,
ಪೊಳೆವ ಹೃದಯಕೆ ಪ್ರತಿದಿವಸ ಪ್ರಹ್ಲಾದಪೋಷಕನು ॥ ೨೭ ॥

ರಸವಿಶೇಷದೊಳತಿವಿಮಲ ಸಿತ ವಸನ ತೋಯಿಸಿ ಅಗ್ನಿಯೊಳಗಿಡೆ,
ಪಸರಿಸುವದು ಪ್ರಕಾಶ ನಸಗುಂದದಲೆ ಸರ್ವತ್ರ,
ತ್ರಿಶಿರದೂಷಣ ವೈರಿ ಭಕ್ತಿ ಸುರಸದಿ ತೋಯ್ದ ಮಹಾತ್ಮರನು,
ಬಾಧಿಸವು ಭವದೊಳಗಿದ್ದರೆಯು ಸರಿ ದುರಿತರಾಶಿಗಳು ॥ ೨೮ ॥

ವಾರಿನಿಧಿಯೊಳಗುಳ್ಳಖಿಳ ನದಿಗಳು ಬೇರೆಬೇರೆ ನಿರಂತರದಿ–
ವಿಹಾರಗೈಯುತ ಪರಮ ಮೋದದಲಿಪ್ಪ ತೆರದಂತೆ,
ಮೂರು ಗುಣಗಳ ಮಾನಿಯೆನಿಸುವ ಶ್ರೀರಮಾರೂಪಗಳು ಹರಿಯಲಿ ತೋರುತಿಪ್ಪವು,
ಸರ್ವಕಾಲದಿ ಸಮರಹಿತವೆನಿಸಿ ॥ ೨೯ ॥

ಕೋಕನದಸಖನುದಯು ಘೋಕಾಲೋಕನಕೆ ಸೊಗಸದಿರೆ, ಭಾಸ್ಕರ ತಾ ಕಳಂಕನೆ?,
ಈ ಕೃತೀಪತಿ ಜಗನ್ನಾಥನಿರೆ ಸ್ವೀಕರಿಸಿ ಸುಖ ಬಡಲರಿಯದ-
ಅವಿವೇಕಿಗಳು ನಿಂದಿಸಿದರೇನಹುದು,
ಈ ಕವಿತ್ವವ ಕೇಳಿ ಸುಖ ಬಡದಿಹರೆ ಕೋವಿದರು ॥ ೩೦ ॥

ಚೇತನಾಚೇತನಗಳಲಿ ಗುರು ಮಾತರಿಶ್ವಾಂತರ್ಗತ ಜಗನ್ನಾಥ ವಿಠಲ-
ನಿರಂತರದಿ ವ್ಯಾಪಿಸಿ ತಿಳಿಸಿಕೊಳ್ಳದಲೆ-
ಕಾತರವ ಪುಟ್ಟಿಸಿ ವಿಷಯದಲಿ, ಯಾತುಧಾನರ ಮೋಹಿಸುವ,
ನಿರ್ಭೀತ ನಿತ್ಯಾನಂದಮಯ ನಿರ್ದೋಷ ನಿರವದ್ಯ ॥ ೩೧ ॥

॥ ಇತಿ ಶ್ರೀ ಪಿತೃಗಣ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀಃ ॥

॥ ೧೫. ಶ್ರೀ ಶ್ವಾಸ ಸಂಧಿ ॥

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ,
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥

ಭಾರತೀಶನು ಘಳಿಗೆಯೊಳು ಮುನ್ನೂರ ಅರವತ್ತು ಸುರ ಜಪಗಳ ತಾ ರಚಿಸುವನು-
ಸರ್ವಜೀವರೊಳಿದ್ದು ಬೇಸರದೆ,
ಕಾರುಣಿಕ ಅವರವರ ಸಾಧನ ಪೂರಯಿಸಿ ಭೂ ಸ್ವರ್ಗ ನರಕವ ಸೇರಿಸುವ,
ಸರ್ವಜ್ಞ ಸಕಲೇಷ್ಟಪ್ರದಾಯಕನು ॥ ೧ ॥

ತಾಸಿಗೊಂಭೈನೂರು ಶ್ವಾಸೋಚ್ಛ್ವಾಸಗಳ ನಡೆಸುತಲಿ ಚೇತನ ರಾಶಿಯೊಳು-
ಹಗಲಿರುಳು ಜಾಗೃತನಾಗಿ ನಿತ್ಯದಲಿ,
ಈ ಸುಮನಸೋತ್ತಂಸ ಲೇಶಾಯಾಸ ವಿಲ್ಲದೆ ಪೋಷಿಸುತ-
ಮೂಲೇಶನಂಘ್ರಿ ಸರೋಜ ಮೂಲದಲಿಪ್ಪ ಕಾಣಿಸದೆ ॥ ೨ ॥

ಅರಿವುದೊಂದ್ಯಾಮದೊಳು ಶ್ವಾಸಗಳೆರಡು ಸಾವಿರದೇಳನೂರನು,
ಶರಸಹಸ್ರದ ಮೇಲೆ ನಾನೂರಹವು ದ್ವಿತಿಯಕ್ಕೆ,
ಮರಳಿ ಯಾಮತ್ರಯಕೆ ವಸುಸಾವಿರದ ಮೇಲ್ನೂರೆಣಿಕೆಯಲಿ,
ಹನ್ನೆರಡು ತಾಸಿಗೆ ಹತ್ತುಸಾವಿರದೆಂಟು ನೂರಹವು ॥ ೩ ॥

ಒಂದುದಿನದೊಳಗನಿಲ ಯಿಪ್ಪತ್ತೊಂದು ಸಾವಿರದಾರುನೂರು,
ಮುಕುಂದನಾಜ್ಞದಿ ಮಾಡಿ ಮಾಡಿಸಿ ಲೋಕಗಳ ಪೊರೆವನೆಂದು ಪವನನ ಪೊಗಳುತಿರು,
ಯೆಂದೆಂದು ಮರೆಯದೆ,
ಈ ಮಹಿಮೆ ಸಂಕ್ರಂದನಾದ್ಯರಿಗುಂಟೆ ನೋಡಲು ಸರ್ವಕಾಲದಲಿ ॥ ೪ ॥

ಮೂರುಲಕ್ಷದ ಮೇಲೆ ವಿಂಶತಿ ಈರೆರಡು ಸಾವಿರವು ಪಕ್ಷಕೆ,
ಆರುಲಕ್ಷದ ಮೇಲೆ ನಾಲ್ವತ್ತೆಂಟು ಸಾವಿರವು ಮಾರುತನು ಮಾಸಕೆ ಜಪಿಸಿ,
ಸಂಸಾರಸಾಗರದಿಂದ ಸುಜನರ ಪಾರುಗಾಣಿಸಿ ಸಲಹುವನು,
ಬಹುಭೋಗಗಳನಿತ್ತು ॥ ೫ ॥

ಎರಡು ತಿಂಗಳಿಗಹುದು ಋತು ಭೂ ಸುರರು ತಿಳಿವುದು-
ಶ್ವಾಸಜಪ ಹನ್ನೆರಡು ಲಕ್ಷದ ಮೇಲೆ ತೊಂಭತ್ತಾರು ಸಾಹಸ್ರ,
ಕರೆಸುವದು ಅಯನಾಹ್ವಯದಿ ಅರೆ ವರುಷ ಮೂವತ್ತೆಂಟು ಲಕ್ಷ,
ಈ ಪರಿ ತಿಳಿವುದೆಂಭತ್ತು ಯೆಂಟು ಸಹಸ್ರ ಕೋವಿದರು ॥ ೬ ॥

ವರುಷಕಿದರಿಮ್ಮಡಿ ಜಪಂಗಳ ಗುರುವರಿಯ ತಾಮಾಡಿ ಮಾಡಿಸಿ-
ದುರಿತಗಳ ಪರಿಹರಿಸುವನು ಚಿಂತಿಸುವ ಸಜ್ಜನರ,
ಸುರ ವಿರೋಧಿಗಳೊಳಗೆ ನೆಲೆಸಿದ್ದರವಿದೂರ ತಮೋಧಿಕಾರಿಗಳ-
ಇರವರಿತು ಸೋಹಂ ಉಪಾಸನೆ ಮಾಳ್ಪನವರಂತೆ ॥ ೭ ॥

ಇನಿತುಪಾಸನೆ ಸರ್ವಜೀವರೊಳನಿಲದೇವನು ಮಾಡುತಿರೆ,
ಚಿಂತನೆಯ ಮಾಡದೆ ಕಂಡ ನೀರೊಳು ಮುಳುಗಿ ನಿತ್ಯದಲಿ,
ಮನೆಯೊಳಗೆ ಕೃಷ್ಣಾಜಿನಾದ್ಯಾಸನದಿ ಕುಳಿತು,
ವಿಶಿಷ್ಟ ಬಹುಸಜ್ಜನನೆನಿಸಿ ಜಪಮಣಿಗಳೆಣಿಸಿದರೇನು ಬೇಸರದೆ ॥ ೮ ॥

ಓದನೋದಕವೆರಡು ತೇಜದೊಳೈದುವವು ಲಯ,
ತದಭಿಮಾನಿಗಳಾದ ಶಿವ ಪವನರು ರಮಾಧೀನತ್ವ ಐದುವರು,
ಈ ದಿವಿಜರೊಡಗೂಡಿ ಶ್ರೀಮಧುಸೂದನನ ಐದುವಳು ಯೆಂದರಿದು,
ಆದರದಲನ್ನೋದಕವ ಕೊಡುತುಣುತ ಸುಖಿಸುತಿರು ॥ ೯ ॥

ಜಾಲಿತೊಪ್ಪಲಜಾವಿಗಳು ಮೆದ್ದಾಲಯದಿ ಸ್ವೇಚ್ಛಾನುಸಾರದಿ ಪಾಲಗರೆವಂದದಲಿ,
ಲಕ್ಷ್ಮೀರಮಣ ತನ್ನವರ ಕೀಳು ಕರ್ಮವ ಸ್ವೀಕರಿಸಿ,
ತನ್ನಾಲಯದೊಳಿಟ್ಟವರ ಪೊರೆವ ಕೃಪಾಳು-
ಕಾಮದ-ಕೈರವದಳಶ್ಯಾಮ-ಶ್ರೀರಾಮ ॥ ೧೦ ॥

ಶಶಿ–ದಿವಾಕರ–ಪಾವಕರೊಳಿಹ ಅಸಿತ–ಸಿತ–ಲೋಹಿತಗಳಲಿ,
ಶಿವ–ಸ್ವಸನ–ಭಾರ್ಗವಿ ಮೂವರೊಳು ಶ್ರೀಕೃಷ್ಣ–ಹಯವದನ–ವಸುಧಿಪಾರ್ದನ ತ್ರಿವೃತು ಯೆನಿಸಿ,
ಈವಸುಮತಿಯೊಳನ್ನೋದಕಾನಳ ಪೆಸರಿನಿಂದಲಿ–
ಸರ್ವಜೀವರ ಸಲಹುವವನು ಕರುಣಿ ॥ ೧೧ ॥

ದೀಪ ಕರದಲಿ ಪಿಡಿದು ಕಾಣದೆ ಕೂಪದೊಳು ಬಿದ್ದಂತೆ,
ವೇದ ಮಹೋಪನಿಷದರ್ಥಗಳ ನಿತ್ಯದಿ ಪೇಳುವವರೆಲ್ಲ,
ಶ್ರೀಪವನಮುಖವಿನುತನಮಲ ಸುರೂಪಗಳ ವ್ಯಾಪಾರ ತಿಳಿಯದೆ,
ಪಾಪಪುಣ್ಯಕೆ ಜೀವಕರ್ತೃ ಅಕರ್ತೃ ಹರಿಯೆಂಬ ॥ ೧೨ ॥

ಅನಿಲದೇವನು ವಾಙ್ಮನೋಮಯನೆನಿಸಿ ಪಾವಕ–ವರುಣ–ಸಂಕ್ರಂದನ ಮುಖಾದ್ಯರೊಳಿದ್ದು,
ಭಗವದ್ರೂಪಗುಣಗಳನು ನೆನೆನೆನೆದು ಉಚ್ಚರಿಸುತಲಿ,
ನಮ್ಮನು ಸದಾ ಸಂತೈಸುವನು,
ಸನ್ಮುನಿಗಣಾರಾಧಿತ ಪದಾಂಬುಜ ಗೋಜ ಸುರರಾಜ ॥ ೧೩ ॥

ಪಾದವೆನಿಪವು ವಾಙ್ಮನೋಮಯ, ಪಾದರೂಪದ್ವಯಗಳೊಳು ಪ್ರಹ್ಲಾದ ಪೋಷಕ–
ಸಂಕರುಷಣಾಹ್ವಯದಿ ನೆಲೆಸಿದ್ದು,
ವೇದಶಾಸ್ತ್ರಪುರಾಣಗಳ ಸಂವಾದರೂಪದಿ ಮನನಗೈವುತ,
ಮೋದಮಯ ಸುಖವಿತ್ತು ಸಲಹುವ ಸರ್ವ ಸಜ್ಜನರ ॥ ೧೪ ॥

ಗಂಧವಹ ದಶದಿಶಗಳೊಳಗರವಿಂದ ಸೌರಭ ಪಸರಿಸುತ–
ಘ್ರಾಣೇಂದ್ರಿಯಗಳಿಗೆ ಸುಖವನೀವುತ ಸಂಚರಿಸುವಂತೆ,
ಇಂದಿರೇಶನ ಸುಗುಣಗಳ ದೈನಂದಿನದಿ ತುತಿಸುತನುಮೋದಿಸುತ–
ಅಂಧಬಧಿರಸುಮೂಕನಂತಿರು ಮಂದ ಜನರೊಡನೆ ॥ ೧೫ ॥

ಶ್ರೀರಮಣನರಮನೆಯ ಪೂರ್ವ ದ್ವಾರದಲ್ಲಿಹ ಸಂಜ್ಞ ಸೂರ್ಯಗ–
ಭಾರತೀಪತಿ ಪ್ರಾಣನೊಳಗಿಹ ಲಕುಮಿನರಯಣನ–
ಸೇರಿ ಮನುಜೋತ್ತಮರು ಸರ್ವಶರೀರಗತ ನಾರಾಯಣನ–
ಅವತಾರಗುಣಗಳ ತುತಿಸುತಲಿ ಮೋದಿಪರು ಮುಕ್ತಿಯಲಿ ॥ ೧೬ ॥

ಪ್ರಣವಪ್ರತಿಪಾದ್ಯನ ಪುರದ ದಕ್ಷಿಣಕವಾಟದಲಿಪ್ಪ,
ಶಶಿರೋಹಿಣಿಗತ ವ್ಯಾನಸ್ಥ ಕೃತಿ ಪ್ರದ್ಯುಮ್ನ ರೂಪವನು ಗುಣಗಳನು ಸಂಸ್ತುತಿಸುತಲಿ–
ಪಿತೃ ಗಣ ಗಧಾಧರನತಿವಿಮಲ ಪಟ್ಟಣದೊಳಗೆ–
ಸ್ವೇಚ್ಛಾನುಸಾರದಿ ಸಂಚರಿಸುತಿಹರು ॥ ೧೭ ॥

ಅಮಿತವಿಕ್ರಮನಾಲಯದ ಪಶ್ಚಿಮಕವಾಟದಿ ಸತಿಸಹಿತ ಸಂಭ್ರಮದಿ–
ಭಗವದ್ಗುಣಗಳನೆ ಪೊಗಳುತಲಿ ಮೋದಿಸುವ–
ಸುಮನಸಾಸ್ಯನೊಳಿಪ್ಪಪಾನಗ ದಮನ ಸಂಕರುಷಣನ–
ನಿಜ ಹೃತ್ಕಮಲದೊಳು ಧೇನಿಸುವ ಋಷಿಗಣವೈದಿ ಸುಖಿಸುವರು ॥ ೧೮ ॥

ಸ್ವರಮಣನ ಗುಣರೂಪ ಸಪ್ತ ಸ್ವರಗಳಿಂದಲಿ ಪಾಡುತಿಹ–
ತುಂಬುರನೆ ಮೊದಲಾದಖಿಳ ಗಂಧರ್ವರು,
ರಮಾಪತಿಯ ಪುರದ ಉತ್ತರಬಾಗಿಲಾಧಿಪ ಸುರಪಶಚಿಗಸಮಾನ ವಾಯುಗ ಹರಿನ್ಮಣಿನಿಭ–
ಶಾಂತಿಪತಿ ಅನಿರುದ್ಧನೈದುವರು ॥ ೧೯ ॥

ಗರುಡಶೇಷಮರೇಂದ್ರಮುಖ ಪುಷ್ಕರನೆ ಕಡೆಯಾಗಿಪ್ಪಖಿಳ ನಿರ್ಜರರು–
ಊರ್ಧ್ವದ್ವಾರಗತ ಭಾರತಿ ಉದಾನದೊಳು ಮೆರೆವ ಮಾಯಾವಾಸುದೇವನ–
ಪರಮ ಮಂಗಳವಯವಗಳ ಮಂದಿರವನೈದಿ,
ಸದಾ ಮುಕುಂದನ ನೋಡಿ ಸುಖಿಸುವರು ॥ ೨೦ ॥

ದ್ವಾರ ಪಂಚಕ ಪಾಲರೊಳಗಿಹ ಭಾರತೀ ಪ್ರಾಣಾಂತರಾತ್ಮಕ–
ಮಾರಮಣನೈರೂಪ ತತ್ತದ್ವಾರದಲಿ ಬಪ್ಪ–
ಮೂರೆರಡು ವಿಧ ಮುಕ್ತಿಯೋಗ್ಯರ ತಾರತಮ್ಯವನರಿತವರ–
ಕಂಸಾರಿ ಸಂಸಾರಾಬ್ಧಿ ದಾಟಿಸಿ ಮುಕ್ತರನ ಮಾಳ್ಪ ॥ ೨೧ ॥

ಬೆಳಗಿಧೂಜಿಯು ನೋಳ್ಪರಿಗೆ ಥಳ ಥಳಿಸುತಲಿ ಕಂಗೊಳಿಸುವಂದದಿ,
ತೊಳೆದು ದೇಹವ ನಾಮಮುದ್ರೆಗಳಿಂದಲಂಕರಿಸಿ,
ಒಲಿಸಿ ನಿತ್ಯ ಕುತರ್ಕ ಯುಕ್ತಿಗಳಲವಬೋಧರ ಶಾಸ್ತ್ರ ಮರ್ಮವ ತಿಳಿಯದಿಹ ನರ,
ಬರಿದೆ ಇದರೊಳು ಶಂಕಿಸಿದರೇನು ॥ ೨೨ ॥

ಉದಧಿಯೊಳು ಊರ್ಮಿಗಳು ತೋರ್ಪಂದದಲಿ, ಹಂಸೋದ್ಗೀಥ ಹರಿ ಹಯವದನ–
ಕೃಷ್ಣಾದ್ಯಮಿತ ಅವತಾರಗಳು ನಿತ್ಯದಲಿ ಪದುಮನಾಭನೊಳಿರುತಿಹವು,
ಸರ್ವದ ಸಮಸ್ತ ಪ್ರಾಣಿಗಳ ಚಿದ್ಹೃದಯಗತ ರೂಪಗಳು–
ಅವ್ಯವಧಾನದಲಿ ಬಿಡದೆ ॥ ೨೩ ॥

ಶರಧಿಯೊಳು ಮಕರಾದಿ ಜೀವರು ಇರಳು ಹಗಲೇಕಪ್ರಕಾರದಿ,
ಚರಿಸುತನುಮೋದಿಸುತ ಇಪ್ಪಂದದಿ,
ಜಗತ್ರಯವು ಇರುತಿಹದು ಜಗದೀಶನುದರದಿ, ಕರೆಸುವದು ಪ್ರತಿಬಿಂಬನಾಮದಿ,
ಧರಿಸಿಹದು ಹರಿನಾಮರೂಪಂಗಳನು ಅನವರತ ॥ ೨೪ ॥

ಜನನಿ ಸೌಕ್ಷ್ಮಪದಾರ್ಥಗಳು ಭೋಜನವ ಮಾಡಲು,
ಗರ್ಭಗತ ಶಿಶು ದಿನದಿನದಿ ಅಭಿವೃದ್ಧಿಯೈದುವ ತೆರದಿ ಜೀವರಿಗೆ,
ಪದುಮನಾಭನು ಸರ್ವರಸ ಉಂಡುಣಿಸಿ ಸಂರಕ್ಷಿಸುವ,
ಜಾಹ್ನವಿ ಜನಕ ಜನ್ಮಾದ್ಯಖಿಳ ದೋಷವಿದೂರ ಗಂಭೀರ ॥ ೨೫ ॥

ಆಶೆಗೊಳಗಾದವನು ಜನರಿಗೆ ದಾಸನೆನಿಸುವ,
ಆಶೆಯನು ನಿಜದಾಸಗೈದಿಹ ಪುಂಸಗೆಲ್ಲರು ದಾಸರೆನಿಸುವರು,
ಶ್ರೀಶನಂಘ್ರಿ ಸರೋಜಯುಗಳ ನಿರಾಶೆಯಿಂದಲಿ ಭಜಿಸೆ ಒಲಿದು,
ರಮಾಸಹಿತ ತನ್ನನೆ ಕೊಡುವ ಕರುಣಾಸಮುದ್ರ ಹರಿ ॥ ೨೬ ॥

ದ್ಯುನದಿ ಆದ್ಯಂತವನು ಕಾಣದೆ ಮನುಜನೇಕತ್ರದಲಿ ತಾ ಮಜ್ಜನವ ಗೈಯೆ,
ಸಮಸ್ತದೋಷದಿ ಮುಕ್ತನಹ ತೆರದಿ,
ಅನಘನಮಲಾನಂತಾನಂತ ಸುಗುಣಗಳೊಳಗೊಂದೇ ಗುಣೋಪಾಸನೆಯ ಗೈವ ಮಹಾತ್ಮ,
ಧನ್ಯ ಕೃತಾರ್ಥನೆನಿಸುವನು ॥ ೨೭ ॥

ವಾಸುದೇವನು ಕರೆಸುವನು ಕಾರ್ಪಾಸನಾಮದಿ, ಸಂಕರುಷಣನು ವಾಸವಾಗಿಹ ತೂಲದೊಳು,
ತಂತುಗನು ಪ್ರದ್ಯುಮ್ನ,
ವಾಸರೂಪನಿರುದ್ಧದೇವನು,
ಭೂಷಣನು ತಾನಾಗಿ ತೋರ್ಪ ಪರೇಶನಾರಾಯಣನು ಸರ್ವದ ಮಾನ್ಯ ಮಾನದನು ॥ ೨೮ ॥

ಲಲನೆಯಿಂದೊಡಗೂಡಿ ಚೈಲಗಳೊಳಗೆ ಓತಪ್ರೋತರೂಪದಿ ನೆಲೆಸಿಹನು–
ಚತುರಾತ್ಮಕ ಜಗನ್ನಾಥ ವಿಠಲನು,
ಛಳಿ ಬಿಸಿಲು ಮಳೆಗಾಳಿಯಿಂದರಘಳಿಗೆ ಬಿಡದಲೆ ಕಾವನೆಂದರಿದು–
ಇಳೆಯೊಳರ್ಚಿಸುತಿರು ಸದಾ ಸರ್ವಾಂತರಾತ್ಮಕನ ॥ ೨೯ ॥

॥ ಇತಿ ಶ್ರೀ ಶ್ವಾಸ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

## ॥ ೧೬. ಶ್ರೀ ದತ್ತಸ್ವಾತಂತ್ರ್ಯ ಸಂಧಿ ॥

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ,
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥

ಕಾರುಣಿಕ ಹರಿ ತನ್ನೊಳಿಪ್ಪಪಾರ ಸ್ವಾತಂತ್ರ್ಯಿಯ ಗುಣವ ನಾನೂರು ತೆಗೆದು,
ಸಪಾದ ಆರೊಂದಧಿಕ ಅರವತ್ತು ನಾರಿಗಿತ್ತ,
ದ್ವಿಷೋಡಶಾಧಿಕ ನೂರು ಪಾದತ್ರಯವ–
ತನ್ನ ಶರೀರದೊಳಗೀಪರಿ ವಿಭಾಗವ ಮಾಡಿ ತ್ರಿಪದಾಹ್ವ ॥ ೧ ॥

ಸತ್ಯಲೋಕಾಧಿಪನೊಳಗೆ ಐವತ್ತೆರಡು, ಪವಮಾನನೊಳು ನಾಲ್ವತ್ತು ಮೇಲೆಂಟಧಿಕ,
ಶಿವನೊಳಗಿಟ್ಟನಿಪ್ಪತ್ತು,
ಚಿತ್ತ ಜೇಂದ್ರರೊಳೈದಧಿಕ ದಶ, ತತ್ವ ಮಾನಿಗಳೆನಿಪ ಸುರರೊಳು ಹತ್ತು,
ಈರೈದಖಿಳ ಜೀವರೊಳಿಟ್ಟ ನಿರವದ್ಯ ॥ ೨ ॥

ಕಲಿ ಮೊದಲುಗೊಂಡಖಿಳ ದಾನವರೊಳಗೆ ನಾಲ್ವತ್ತೈದು,
ಈ ಪರಿ ತಿಳಿದುಪಾಸನೆ ಮಾಡು ಮರೆಯದೆ ಪರಮ ಭಕುತಿಯಲಿ,
ಇಳೆಯೊಳಗೆ ಸಂಚರಿಸು, ಲಕ್ಷ್ಮೀ ನಿಲಯನ ಆಳು ಆನೆಂದು,
ಸರ್ವ ಸ್ಥಳಗಳಲಿ ಸಂತೈಸುತಿಪ್ಪನು ಗೆಳೆಯನಂದದಲಿ ॥ ೩ ॥

ಅವನಿಪ ಸ್ವಾಮಿತ್ವ ಧರ್ಮವ ಸ್ವವಶ ಮಾತ್ಯರಿಗಿತ್ತು,
ತಾ ಮತ್ತವರ ಮುಖದಲಿ ರಾಜಕಾರ್ಯವ ಮಾಡಿಸುವ ತೆರದಿ,
ಕವಿಭಿರೀಡಿತ ತನ್ನ ಕಳೆಗಳ ದಿವಿಜದಾನವ ಮಾನವರೊಳಿಟ್ಟು,
ಅವಿರತ ಗುಣತ್ರಯಜ ಕರ್ಮವ ಮಾಡಿ ಮಾಡಿಸುವ ॥ ೪ ॥

ಪುಣ್ಯಪಾಪಗಳೀ ತೆರದಿ ಕಾರುಣ್ಯಸಾಗರ,
ದೇವ–ದಾನವ–ಮಾನವರೊಳಿಟ್ಟವರ ಫಲವ್ಯತ್ಯಾಸವನೆ ಮಾಡಿ,
ಬನ್ನಬಡಿಸುವ ಭಕ್ತಿಹೀನರ ಸನ್ನುತ ಸುಕರ್ಮ ಫಲತೆಗೆದು,
ಪ್ರಪನ್ನರಿಗೆ ಕೊಟ್ಟವರ ಸುಖಬಡಿಸುವನು ಸುಭುಜಾಹ್ವ ॥ ೫ ॥

ಮಾಣಿಕವ ಕೊಂಡಂಗಡಿಯೊಳಜಿವಾನಕೊಟ್ಟಾ ಪುರುಷನ ಸಮಾಧಾನ ಮಾಡುವ ತೆರದಿ,
ದೈತ್ಯರು ನಿತ್ಯದಲಿ ಮಾಳ್ಪ ದಾನ ಯಜ್ಞಾದಿಗಳ ಫಲ,
ಪವಮಾನ ಪಿತನಪಹರಿಸಿ,
ಅಸಮೀಚೀನ ಸುಖಗಳ ಕೊಟ್ಟು ಅಸುರರ ಮತ್ತರನು ಮಾಳ್ಪ ॥ ೬ ॥

ಏಣಲಾಂಛನನಮಲಕಿರಣ ಕ್ರಮೇಣ ವೃದ್ಧಿಯನೈದಿ,
ಲೋಗರ ಕಾಣಗೊಡದಿಹ ಕತ್ತಲೆಯ ಭಂಗಿಸುವ ತೆರದಂತೆ,
ವೈನತೇಯಾಂಸಗನ ಮೂರ್ತಿ ಧ್ಯಾನವುಳ್ಳ ಮಹಾತ್ಮರಿಗೆ,
ಸುಜ್ಞಾನ ಭಕ್ತ್ಯಾದಿಗಳು ವರ್ಧಿಸಿ ಸುಖವೆ ಕೊಡುತಿಹವು ॥ ೭ ॥

ಜನಪನರಿಕೆಯ ಚೋರ ಪೊಳಲೊಳು ಧನವ ಕದ್ದೊಯ್ದೀಯಲವನ–
ಅವಗುಣಗಳೆಣಿಸದೆ ಪೊರೆವ ಕೊಡದಿರೆ ಶಿಕ್ಷಿಸುವ ತೆರದಿ,
ಅನುಚಿತೋಚಿತ ಕರ್ಮ ಕೃಷ್ಣಾರ್ಪಣವೆನಲು ಕೈಕೊಂಡು,
ತನ್ನರಮನೆಯೊಳಿಟ್ಟಾನಂದ ಬಡಿಸುವ ಮಾಧವಾನತರ ॥ ೮ ॥

ಅನ್ನದನ್ನಾದನ್ನ ನಾಮಕ ಮುನ್ನ ಪೇಳ್ದ ಪ್ರಕಾರ,
ಜೀವರೊಳನ್ನರೂಪ ಪ್ರವೇಶಗೈದವರವರ ವ್ಯಾಪಾರ–
ಬನ್ನಬಡದಲೆ ಮಾಡಿ ಮಾಡಿಸಿ ಧನ್ಯರಿವರಹುದೆಂದೆನಿಸಿ,
ತ್ರೈಗುಣ್ಯವರ್ಜಿತ ತತ್ತದಾಹ್ವಯನಾಗಿ ಕರೆಸುವನು ॥ ೯ ॥

ಸಲಿಲಬಿಂದು ಪಯೋಬ್ಧಿಯೊಳು ಬೀಳಲು ವಿಕಾರವನೈದ ಬಲ್ಲುದೆ,
ಜಲವು ತದ್ರೂಪವನೆ ಐದುವದೆಲ್ಲ ಕಾಲದಲಿ,
ಕಲಿಮಲಾಪಹನರ್ಚಿಸುವ ಸತ್ಕುಲಜರ ಕುಕರ್ಮಗಳು,
ತಾ ನಿಷ್ಕಲುಷ ಕರ್ಮಗಳಾಗಿ ಪುರುಷಾರ್ಥಗಳ ಕೊಡುತಿಹವು ॥ ೧೦ ॥

ಮೊಗದೊಳಗೆ ಮೊಗವಿಟ್ಟು ಮುದ್ದಿಸಿ ಮಗುವಿನಂ ಬಿಗಿದಪ್ಪಿ ರಂಬಿಸಿ,
ನೇಹದಿ ತೆಗೆದು ತನ್ನಯ ಸ್ತನಗಳುಣಿಸುವ ಜನನಿಯಂದದಲಿ,
ಅಗಣಿತಾತ್ಮನು ತನ್ನ ಪಾದಾಬ್ಜಗಳ ಧೇನಿಪ ಭಕ್ತ ಜನರಿಗೆ,
ಪ್ರಘಟಕನು ತಾನಾಗಿ ಸೌಖ್ಯಗಳೀವ ಸರ್ವತ್ರ ॥ ೧೧ ॥

ತೋಟಿಗನು ಭೂಮಿಯೊಳು ಬೀಜವ ನಾಟಬೇಕೆಂದೆನುತ ಹಿತದಲಿ ಮೋಟೆಯಿಂ ನೀರೆತ್ತಿ–
ಸಸಿಗಳ ಸಂತಯಿಸುವಂತೆ,
ಪಾಟುಬಡದಲೆ ಜಗದಿ ಜೀವರ ಘೋಟಕಾಸ್ಯನು ಸೃಜಿಸಿ,
ಯೋಗ್ಯತೆ ದಾಟಗೊಡದಲೆ ಸಲಹುತಿಪ್ಪನು ಸರ್ವಕಾಲದಲಿ ॥ ೧೨ ॥

ಭೂಮಿಯೊಳು ಜಲವಿರೆ ತೃಷಾರ್ತನು ತಾ ಮರೆದು ಮೊಗವೆತ್ತಿ–
ಎಣ್ದೆಸೆ ವ್ಯೋಮ ಮಂಡಲದೊಳಗೆ ಕಾಣದೆ ಮಿಡುಕುವಂದದಲಿ,
ಶ್ರೀಮನೋರಮ ಸರ್ವರಂತರ್ಯಾಮಿಯಾಗಿರೆ, ತಿಳಿಯಲರಿಯದೆ,
ಭ್ರಾಮಕರು ಭಜಿಸುವರು ಭಕುತಿಯಲನ್ಯ ದೇವತೆಯ ॥ ೧೩ ॥

ಮುಖ್ಯಫಲ ವೈಕುಂಠ, ಮುಖ್ಯಾಮುಖ್ಯಫಲ ಮಹದಾದಿಲೋಕ,
ಅಮುಖ್ಯಫಲ ವೈಷಯಿಕವೆಂದರಿದತಿ ಭಕುತಿಯಿಂದ,
ರಕ್ಕಸಾರಿಯ ಭಜಿಸುತಲಿ ನಿರ್ದು:ಖನಾಗು ನಿರಂತರದಿ,
ಮೊರೆ ಪೊಕ್ಕವರ ಬಿಡ ಭೃತ್ಯವತ್ಸಲ, ಭಾರತೀಶ ಪಿತ ॥ ೧೪ ॥

ವ್ಯಾಧಿಯಿಂ ಪೀಡಿತ ಶಿಶುವಿಗೆ ಗುಡೋದಕವ ನೆರೆದು,
ಅದಕೆ ಔಷಧ ತೇದು ಕುಡಿಸುವ ತಾಯಿಯೋಪಾದಿಯಲಿ,
ಸರ್ವಜ್ಞ ಬಾದರಾಯಣ ಭಕ್ತ ಜನಕೆ ಪ್ರಸಾದರೂಪಕನಾಗಿ,
ಭಾಗವತಾದಿಯಲಿ ಪೇಳಿದನು ಧರ್ಮಾದಿಗಳೆ ಫಲವೆಂದು ॥ ೧೫ ॥

ದೂರದಲ್ಲಿಹ ಪರ್ವತ ಘನಾಕಾರತೋರ್ಪುದು ನೋಳ್ಪ ಜನರಿಗೆ,
ಸಾರ ಗೈಯಲು ಸರ್ವ ವ್ಯಾಘ್ರಗಳಿಂದ ಭಯವಿಹುದು,
ಘೋರತರ ಸಂಸಾರ ಸೌಖ್ಯ ಅಸಾರ ತರವೆಂದರಿತು,
ನಿತ್ಯ ರಮಾರಮಣನ ಆರಾಧಿಸುವರು ಅದರಿಂದ ಬಲ್ಲವರು ॥ ೧೬ ॥

ಕೆಸರ ಘಟಗಳ ಮಾಡಿ ಬೇಸಿಗೆ ಬಿಸಿಲೊಳಗಿಟ್ಟೊಣಗಿಸಿದರದು,
ಘನ ರಸವು ತುಂಬಲು ಬಹುದೆ?
ಸರ್ವಸ್ವತಂತ್ರ ನಾನೆಂಬ ಪಶುಪನರನೇನೇನು ಮಾಳ್ಪಾನಶನ ದಾನ ಸ್ನಾನ ಕರ್ಮಗಳೊಸರಿ ಪೋಪವು,
ಬರಿದೆ ದೇಹಾಯಾಸವನೆ ಕೊಟ್ಟು ॥ ೧೭ ॥

ಎರಡು ದೀಕ್ಷೆಗಳಿಹವು ಬಾಹ್ಯ-ಅಂತರವೆನಿಪ ನಾಮದಲಿ,
ಬುಧರಿಂದರಿತು ದೀಕ್ಷಿತನಾಗು ದೀರ್ಘದ್ವೇಷಗಳ ಬಿಟ್ಟು,
ಹರಿಯೆ ಸರ್ವೋತ್ತಮ-ಕ್ಷರಾಕ್ಷರ ಪುರುಷ ಪೂಜಿತ ಪಾದ-
ಜನ್ಮಾದ್ಯರವಿದೂರ-ಸುಖಾತ್ಮ-ಸರ್ವಗನೆಂದು ಸ್ಮರಿಸುತಿರು ॥ ೧೮ ॥

ಹೇಯವಸ್ತುಗಳಿಲ್ಲ, ಉಪಾದೇಯ ವಸ್ತುಗಳಿಲ್ಲ,
ನ್ಯಾಯಾನ್ಯಾಯ ಧರ್ಮಗಳಿಲ್ಲ, ದ್ವೇಷಾಸೂಯೆ ಮೊದಲಿಲ್ಲ,
ತಾಯಿತಂದೆಗಳಿಲ್ಲ ಕಮಲದಳಾಯತಾಕ್ಷಗೆಯೆನಲು,
ಈಸುವ ಕಾಯಿಯಂದದಿ ಮುಳಗಗೊಡದೆ ಭವಾಬ್ಧಿ ದಾಟಿಸುವ ॥ ೧೯ ॥

ಮಂದನಾದರು ಸರಿಯೆ ಗೋಪೀಚಂದನ ಶ್ರೀಮುದ್ರೆಗಳ ನಲವಿಂದ ಧರಿಸುತ,
ಶ್ರೀತುಲಸಿ ಪದುಮಾಕ್ಷಿ ಸರಗಳನು ಕಂಧರದ ಮಧ್ಯದಲಿ ಧರಿಸಿ,
ಮುಕುಂದ-ಶ್ರೀಭೂರಮಣ-ತ್ರಿಜಗದ್ವಂದ್ಯ-ಸರ್ವ ಸ್ವಾಮಿ,
ಮಮ ಕುಲ ದೈವವೆನೆ ಪೊರೆವ ॥ ೨೦ ॥

ಪ್ರಾಯಧನಮದದಿಂದ ಜನರಿಗೆ ನಾಯಕ ಪ್ರಭುವೆಂಬಿ,
ಪೂರ್ವದಿ ತಾಯಿ ಪೊಟ್ಟೆಯೊಳಿರಲು ಪ್ರಭುವೆಂದೇಕೆ ಕರೆಯರಲ್ಯೆ,
ಕಾಯ ನಿನ್ನನು ಬಿಟ್ಟು ಪೋಗಲು ರಾಯ ನೀನೆಂಬುವ ಪ್ರಭುತ್ವ ಪಲಾಯನವನ್ಯೆದಿತು,
ಸಮೀಪದಲಿದ್ದರದು ತೋರು ॥ ೨೧ ॥

ವಾಸುದೇವೇಕ ಪ್ರಕಾರದಿ ಈಶನೆನಿಸುವ,
ಬ್ರಹ್ಮ ರುದ್ರ ಶಚೀಶ ಮೊದಲಾದಮರರೆಲ್ಲರು ದಾಸರೆನಿಸುವರು,
ಈ ಸುಮಾರ್ಗವ ಬಿಟ್ಟು ಸೋಹಮುಪಾಸನೆಯಗ್ಯೆವ ನರ,
ದೇಹಜ ದ್ಯೆಶಿಕ ಕ್ಲೇಶಗಳು ಬರಲವನೇಕೆ ಬಿಡಿಸಿಕೊಳ ॥ ೨೨ ॥

ಆ ಪರಬ್ರಹ್ಮನಲಿ ತ್ರಿಜಗದ್ವ್ಯಾಪಕತ್ವ–ನಿಯಾಮಕತ್ವ–ಸ್ಥಾಪಕತ್ವ–
ವಶತ್ವ–ಈಶತ್ವಾದಿ ಗುಣಗಳಿಗೆ ಲೋಪವಿಲ್ಲ,
ಏಕಪ್ರಕಾರ ಸ್ವರೂಪವೆನಿಪವು ಸರ್ವಕಾಲದಿ ಪೋಪುವಲ್ಲವು,
ಜೀವರಿಗೆ ದಾಸತ್ವದೋಪಾದಿ ॥ ೨೩ ॥

ನಿತ್ಯನೂತನ–ನಿರ್ವಿಕಾರ–ಸುಹೃತ್ತಮ–ಪ್ರಣವಸ್ಥ–
ವರ್ಣೋತ್ಪತ್ತಿಕಾರಣ–ವಾಙ್ಮನೋಮಯ–ಸಾಮಗಾನರತ,
ದತ್ತ ಕಪಿಲ ಹಯಾಸ್ಯ ರೂಪದಿ ಪೃಥ್ಪೃತಗ್ಜೀವರೊಳಗಿದ್ದು ಪ್ರವರ್ತಿಸುವನು,
ಅವರವರ ಯೋಗ್ಯತೆ ಕರ್ಮವನುಸರಿಸಿ ॥ ೨೪ ॥

ಶ್ರುತಿಗಳಾತನಮಾತು, ವಿಮಲ ಸ್ಮೃತಿಗಳಾತನ ಶಿಕ್ಷೆ,
ಜೀವ ಪ್ರತತಿ ಪ್ರಕೃತಿಗಳೆರಡು ಪ್ರತಿಮೆಗಳೆನಿಸಿ ಕೊಳುತಿಹವು,
ಇತರ ಕರ್ಮಗಳೆಲ್ಲ ಲಕ್ಷ್ಮೀಪತಿಗೆ ಪೂಜೆಗಳೆಂದು ಸ್ಮರಿಸುತ,
ಚತುರವಿಧ ಪುರುಷಾರ್ಥಗಳ ಬೇಡದಿರು ಸ್ವಪ್ನದಲಿ ॥ ೨೫ ॥

ಭೂತಳಾಧಿಪನಾಜ್ಞಧಾರಕ ದೂತರಿಗೆ ಸೇವಾನುಸಾರದಿ ವೇತನವ ಕೊಟ್ಟು,
ಅವರ ಸಂತೋಷಿಸುವ ತೆರದಂತೆ,
ಮಾತರಿಶ್ವಪ್ರಿಯನು ಪರಮಪ್ರೀತಿಪೂರ್ವಕ–
ಸದ್ಗುಣಂಗಳ ಗಾಧಕರ ಸಂತೋಷಬಡಿಸುವ ಇಹಪರಂಗಳಲಿ ॥ ೨೬ ॥

ದೀಪದಿವದಲಿ ಕಂಡರಾದಡೆ ಲೋಪಗ್ಯೆಸುವರಾಕ್ಷಣ,
ಹರಿ ಸಮೀಪದಲ್ಲಿರೆ ನಂದನಾಮಸುನಂದವೆನಿಸುವವು,
ಔಪಚಾರಿಕವಲ್ಲ ಸುಜನರ ಪಾಪಕರ್ಮವು ಪುಣ್ಯವೆನಿಪವು,
ಪಾಪಿಗಳ ಸತ್ಪುಣ್ಯ ಕರ್ಮವು ಪಾಪವೆನಿಸುವವು ॥ ೨೭ ॥

ಧನವ ಸಂಪಾದಿಸುವ ಪ್ರದ್ರಾವಣಿಕರಂದದಿ ಕೋವಿದರ ಮನೆ ಮನೆಗಳಲಿ ಸಂಚರಿಸು,
ಶಾಸ್ತ್ರಶ್ರವಣಗೋಸುಗದಿ,
ಮನನಗೈದುಪದೇಶಿಸುತ ದುರ್ಜನರ ಕೂಡಾಡದಿರು ಸ್ವಪ್ನದಿ,
ಪ್ರಣತ ಕಾಮದ ಕೊಡುವ ಸೌಖ್ಯಗಳಿಹಪರಂಗಳಲಿ ॥ ೨೮ ॥

ಕಾರಕಕ್ರಿಯ ದ್ರವ್ಯ ವಿಭ್ರಮ ಮೂರುವಿಧ ಜೀವರಿಗೆ–
ಬಹು ಸಂಸಾರಕಿವು ಕಾರಣವೆನಿಸುವವು ಎಲ್ಲ ಕಾಲದಲಿ,
ದೂರವೋಡಿಸಿ ಭ್ರಾಮಕತ್ರಯ ಮಾರಿಗೊಳಗಾಗದಲೆ ಸರ್ವಾಧಾರಕನ ಚಿಂತಿಸುತಲಿರು,
ಸರ್ವತ್ರ ಮರೆಯದಲೆ ॥ ೨೯ ॥

ಕರಣ ಕರ್ಮವ ಮಾಡಿದರೆ ವಿಸ್ಮರಣೆ ಕಾಲದಿ ಮಾತುಗಳಿಗುತ್ತರವ ಕೊಡದಲೆ ಸುಮ್ಮನಿಪ್ಪನು,
ಜಾಗರಾವಸ್ಥೆ ಕರುಣಿಸಲು ವ್ಯಾಪಾರ ಮಾಡುವ,
ಬರಲು ನಾಲ್ಕಾವಸ್ಥೆಗಳು ಪರಿಹರಿಸಿಕೊಳನೇತಕೆ–
ಸ್ವತಂತ್ರನು ತಾನೆಯೆಂಬುವನು? ॥ ೩೦ ॥

ಯುಕ್ತಿ ಮಾತುಗಳಲ್ಲ ಶ್ರುತಿಸ್ಮೃತ್ಯಕ್ತ ಮಾತುಗಳಿವು,
ವಿಚಾರಿಸೆ ಮುಕ್ತಿಗಿವು ಸೋಪಾನವೆನಿಪವು ಪ್ರತಿಪ್ರತೀ ಪದವು,
ಭಕ್ತಿಪೂರ್ವಕ ಪಠಿಸುವವರಿಗೆ ವ್ಯಕ್ತಿ ಕೊಡುವ ಸ್ವರೂಪಸುಖ,
ಪ್ರವಿವಿಕ್ತರನ ಮಾಡುವನು ಭವಭಯದಿಂದ ಬಹುರೂಪ ॥ ೩೧ ॥

ಶ್ರೀನಿವಾಸನ ಸುಗುಣ ಮಣಿಗಳ ಪ್ರಾಣಮತ ವಯುನಾಖ್ಯ ಸೂತ್ರದಿ–
ಪೋಣಿಸಿದ ಮಾಲಿಕೆಯ ವಾಙ್ಮಯಂಗೆಸಮರ್ಪಿಸಿದ–
ಜ್ಞಾನಿಗಳ ದೃಗ್ವಿಷಯವಹುದು, ಅಜ್ಞಾನಿಗಳಿಗೆ ಅಸಹ್ಯ ತೋರ್ಪುದು,
ಮಾಣಿಕವ ಮರ್ಕಟನ ಕೈಯಲಿ ಕೊಟ್ಟ ತೆರದಂತೆ ॥ ೩೨ ॥

ಶ್ರೀವಿಧೀರ ವಿಪಾಹಿಪೇಶ ಶಚೀವರಾತ್ಮಭವಾರ್ಕ ಶಶಿ ದಿಗ್ದೇವ–
ಋಷಿ ಗಂಧರ್ವ ಕಿನ್ನರ ಸಿದ್ಧ ಸಾಧ್ಯಗಣ ಸೇವಿತ ಪದಾಂಭೋಜ,
ತ್ವತ್ಪಾದಾವಲಂಬಿಗಳಾದ ಭಕ್ತರ ಕಾವ,
ಕರುಣಾಸಾಂದ್ರ ಲಕ್ಷ್ಮೀ ಹೃತ್ಕುಮುದಚಂದ್ರ ॥ ೩೩ ॥

ಆದರಿಶ ಅಗತಾಕ್ಷ ಭಾಷಾಭೇದದಿಂದಲಿ ಕರೆಯಲದನು,
ನಿಷೇಧಗೈದವಲೋಕಿಸದೆ ಬಿಡುವರೆ ವಿವೇಕಿಗಳು,
ಮಾಧವನ ಗುಣ ಪೇಳ್ವ ಪ್ರಾಕೃತ ವಾದರೆಯು ಸರಿ,
ಕೇಳಿ ಪರಮಾಹ್ಲಾದ ಬಡದಿಪ್ಪರೆ ನಿರಂತರ ಬಲ್ಲ ಕೋವಿದರು ॥ ೩೪ ॥

ಭಾಸ್ಕರನ ಮಂಡಲವ ಕಂಡು ನಮಸ್ಕರಿಸಿ ವೋದಿಸದೆ,
ದ್ವೇಷದಿ ತಸ್ಕರನು ನಿಂದಿಸಲು ಕುಂದಹುದೇ ದಿವಾಕರಗೆ?
ಸಂಸ್ಕೃತವಿದಲ್ಲೆಂದು ಕುಹಕ ತಿರಸ್ಕರಿಸಲೇನಹುದು?
ಭಕ್ತಿ ಪುರಸ್ಕರದಿ ಕೇಳ್ವರಿಗೆ ವೊಲಿವನು ಪುಷ್ಕರಾಕ್ಷ ಸದಾ ॥ ೩೫ ॥

ಪತಿತನ ಕಪಾಲದೊಳು ಭಾಗೀರಥಿಯ ಜಲವಿರೆ ಪೇಯವೆನಿಪುದೆ?
ಇತರ ಕವಿ ನಿರ್ಮಿತ ಕುಕಾವ್ಯಾ ಶ್ರಾವ್ಯ ಬುಧರಿಂದ?
ಕೃತಿಪತಿ ಕಥಾನ್ವಿತವೆನಿಪ ಪ್ರಾಕೃತವೆ ತಾ ಸಂಸ್ಕೃತವೆನಿಸಿ–
ಸದ್ಗತಿಯನೀವುದು ಭಕ್ತಿ ಪೂರ್ವಕ ಕೇಳಿ ಪೇಳ್ವರಿಗೆ ॥ ೩೬ ॥

ವೇದ ಶಾಸ್ತ್ರ ಸಯುಕ್ತಿ ಗ್ರಂಥಗಳೋದಿ ಕೇಳ್ದವನಲ್ಲ,
ಸಂತತ ಸಾಧುಗಳ ಸಹವಾಸ ಸಲ್ಲಾಪಗಳು ವೊದಲಿಲ್ಲ,
ವೋದ ತೀರ್ಥಾರ್ಯರ ಮತಾನುಗರಾದವರ ಕರುಣದಲಿ ಪೇಳ್ದೆ,
ರಮಾಧವ ಜಗನ್ನಾಥ ವಿಠಲ ತಿಳಿಸಿದದರೊಳಗೆ ॥ ೩೭ ॥

॥ ಶ್ರೀ ದತ್ತಸ್ವಾತಂತ್ರ್ಯ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

## ॥ ೧೭. ಶ್ರೀ ಸ್ವಗತಸ್ವಾತಂತ್ರ್ಯ ಸಂಧಿ ॥

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ,
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥

ಸ್ವಗತ ಸ್ವಾತಂತ್ರ್ಯ ಗುಣವ ಹರಿ ತೆಗೆದು ಬ್ರಹ್ಮಾದ್ಯರಿಗೆ ಕೊಟ್ಟದು,
ಭೃಗುಮುನಿಪ ಪೇಳಿದನು ಇಂದ್ರದ್ಯುಮ್ನಕ್ಷಿತಿಪನಿಗೆ ॥

ಪರಮ ವಿಷ್ಣು ಸ್ವತಂತ್ರ, ಮಾಯಾ ತರುಣಿ ವಕ್ಷಸ್ಥಳ ನಿವಾಸಿ,
ಸರಸಿಜೋದ್ಭವ ಪ್ರಾಣರೀರ್ವರು ಸಚಿವರೆನಿಸುವರು,
ಸರುವ ಕರ್ಮಗಳಲ್ಲಿ ತತ್ಪ್ರಿಯರುರಗ ಭೂಷಣಹಂಕೃತಿತ್ರಯ,
ಕರೆಸುವಮರೇಂದ್ರಾರ್ಕ ಮುಖರಿಂದ್ರಿಯಪರೆನಿಸುವರು ॥ ೧ ॥

ಈ ದಿವೌಕಸರಂತೆ ಕಲಿವೊದಲಾದ ದೈತ್ಯರು ಸರ್ವದೇಹದಿ ತೋದಕರು ತಾವಾಗಿ,
ವ್ಯಾಪಾರಗಳ ಮಾಡುವರು,
ವೇಧನಂದದಿ ಕಲಿಯಹಂಕಾರಾಧಿಪಾಧಮ,
ಮಧುಕುಕೈಟಭ ಕ್ರೋಧಿಶಂಬರ ಮುಖರು ಮನಸಿಗೆ ಸ್ವಾಮಿಯೆನಿಸುವರು ॥ ೨ ॥

ದೇವತೆಗಳೋಪಾದಿ ನಿತ್ಯದಿ ಏವಮಾದೀ ನಾಮದಿಂದಲಿ,
ಯಾವದಿಂದ್ರಿಯಗಳಲಿ ವ್ಯಾಪಾರಗಳ ಮಾಡುವರು,
ಸೇವಕರ ಸೇವಾನುಗುಣ ಫಲವೀವ ನೃಪನಂದದಲಿ,
ತನ್ನ ಸ್ವಭಾವ ಸ್ವಾತಂತ್ರ್ಯ ವಿಭಾಗವ ಮಾಡಿಕೊಟ್ಟ ಹರಿ ॥ ೩ ॥

ಅಗಣಿತ ಸ್ವಾತಂತ್ರ್ಯವ ನಾಲ್ಬಗೆ ವಿಭಾಗವ ಮಾಡಿ,
ಒಂದನು ತೆಗೆದು ದಶವಿಧಗೈಸಿ, ಪಾದರೆ ಪಂಚಪ್ರಾಣನಲಿ,
ವೊಗಚತುಷ್ಟಯನೊಳು ಸಪಾದೈದುಗುಣವಿರಿಸಿದ,
ಮತ್ತೆ ದಶವಿಧ ಯುಗಳ ಗುಣವನು ಮಾಡಿ ಎರಡು ಸದಾಶಿವನೊಳಿಟ್ಟ ॥ ೪ ॥

ಪಾಕಶಾಸನ ಕಾಮರೊಳು ಸಾರ್ಧೈಕವಿಟ್ಟ, ದಶೇಂದ್ರಿಯರ ಸುದಿವೌಕಸಾದ್ಯರೊಳೊಂದು,
ಯಾವಜ್ಜೀವರೊಳಗೊಂದು,
ನಾಲ್ಕುವರೆ ಕಲ್ಯಾದಿ ದೈತ್ಯಾನೀಕಕಿತ್ತನು,
ಎರಡು ತ್ರಿವಿಧ ವಿವೇಕ ಗೈಸಿ, ಇಂದಿರಗೆ ಒಂದು–ಎರಡಾತ್ಮ ತನ್ನೊಳಗೆ ॥ ೫ ॥

ಈ ವಿಧದಿ ಸ್ವಾತಂತ್ರ್ಯತ್ವವ ದೇವಮಾನವ ದಾನವರೊಳು,
ರಮಾವಿನೋದಿ ವಿಭಾಗ ಮಾಡಿಟ್ಟಲ್ಲೆ ರಮಿಸುವನು,
ಮೂವರೊಳಗಿದ್ದವರ ಕರ್ಮವ ತಾ ವಿಕಾರವಗೈಸದಲೆ,
ಕಲ್ಪಾವಸಾನಕೆ ಕೊಡುವನು ಅನಾಯಾಸವರ ಗತಿಯ ॥ ೬ ॥

ಆಲಯುಗಳೊಳಿಪ್ಪ ದೀಪಜ್ವಾಲೆ ವರ್ತಿಗಳನುಸರಿಸಿ ಜನರಾಲಿಗೊಪ್ಪುವ ತೆರದಿ,
ಹರಿ ತಾ ತೋರ್ಪ ಸರ್ವತ್ರ,
ಕಾಲಕಾಲದಿ ಶ್ರೀಧರಾ ದುರ್ಗಾಲಲನೆಯರ ಕೂಡಿ ಸುಖಮಯ,
ಲೀಲೆ ಗೈಯಲು ತ್ರಿಗುಣ ಕಾರ್ಯಗಳಿಹವು ಜೀವರಿಗೆ ॥ ೭ ॥

ಇಂದ್ರಿಯಗಳಿಂ ಮಾಳ್ಪ ಕರ್ಮ ದ್ವಂದ್ವಗಳ ತನಗರ್ಪಿಸಲು,
ಗೋವಿಂದ ಪುಣ್ಯವ ಕೊಂಡು ಪಾಪವ ಭಸ್ಮವನೆ ಮಾಳ್ಪ,
ಇಂದಿರೇಶನು ಭಕ್ತಜನರನು ನಿಂದಿಸುವರೊಳಗಿಪ್ಪ ಪುಣ್ಯವ ತಂದು ತನ್ನವಗೀವ,
ಪಾಪಗಳವರಿಗುಣಿಸುವನು ॥ ೮ ॥

ಹೊತ್ತು ಹೊತ್ತಿಗೆ ಪಾಪಕರ್ಮ ಪ್ರವರ್ತಕರ ನಿಂದಿಸದೆ,
ತನಗಿಂದುತ್ತಮರ ಗುಣಕರ್ಮಗಳ ಕೊಂಡಾಡದಲೆ ಇಪ್ಪ ಮರ್ತ್ಯರಿಗೆ,
ಗೋ ಬ್ರಾಹ್ಮಣ ಸ್ತ್ರೀ ಹತ್ಯ ಮೊದಲಾದಖಿಳ ದೋಷಗಳಿತ್ತಪನು,
ಸಂದೇಹ ಪಡಸಲ್ಲಖಿಳ ಶಾಸ್ತ್ರಮತ ॥ ೯ ॥

ತನ್ನಸ್ವಾತಂತ್ರಿಯ ಗುಣಗಳ ಹಿರಣ್ಯ ಗರ್ಭಾದ್ಯರಿಗೆ–
ಕಲಿಮುಖದಾನವರ ಸಂತತಿಗೆ ಅವರಧಿಕಾರವನುಸರಿಸಿ ಪುಣ್ಯಪಾಪಗಳೀವ,
ಬಹು ಕಾರುಣ್ಯಸಾಗರನು,
ಅಲ್ಪಶಕ್ತಿಗಳುಣ್ಣಲರಿಯದೆ ಇರಲು ಉಣಕಲಿಸಿದನು ಜೀವರಿಗೆ ॥ ೧೦ ॥

ಸತ್ಯವಿಕ್ರಮ ಪುಣ್ಯ ಪಾಪ ಸಮಸ್ತರಿಗೆ ಕೊಡಲೋಸುಗದಿ,
ನಾಲ್ವತ್ತು ಭಾಗವ ಮಾಡಿ ಲೇಶಾಂಶವನು ಜನಕೀವ,
ಅತ್ಯಲುಪ ಪರಮಾಣು ಜೀವಗೆ ಸಾಮರ್ಥ್ಯವನು ತಾ ಕೊಟ್ಟು,
ಸ್ಥೂಲ ಪದಾರ್ಥಗಳುಂಡುಣಿಪ ಸರ್ವದ ಸರ್ವ ಜೀವರಿಗೆ ॥ ೧೧ ॥

ತಿಮಿರ ತರಣಿಗಳೇಕ ದೇಶದಿ ಸಮನಿಸಿಪ್ಪವೆ ಎಂದಿಗಾದರು,
ಭ್ರಮಣಛಳಿ ಬಿಸಲಂಜಿಕೆಗಳುಂಟೇನೊ ಪರ್ವತಕೆ,
ಅಮಿತ ಜೀವರೊಳಿದ್ದು ಲಕ್ಷ್ಮೀರಮಣ ವ್ಯಾಪಾರಗಳ ಮಾಡುವ,
ಕಮಲಪತ್ರ ಸರೋವರಗಳೊಳಗಿಪ್ಪ ತೆರದಂತೆ ॥ ೧೨ ॥

ಅಂಬುಜೋದ್ಭವ ಮುಖ್ಯಸುರ ಕಲಿ ಶಂಬರಾದಿ ಸಮಸ್ತ ದೈತ್ಯಕದಂಬಕನುದಿನ,
ಪುಣ್ಯಪಾಪ ವಿಭಾಗವನೆ ಮಾಡಿ,
ಅಂಬುಧಿಯ ಜಲವನು ಮಹದ್ಘಟ ದಿಂಬನಿತು ತುಂಬುವತೆರದಿ,
ಪ್ರತಿಬಿಂಬರೊಳು ತಾನಿದ್ದು ಯೋಗ್ಯತೆ ಯಂತೆ ಫಲವೀವ ॥ ೧೩ ॥

ಇನಿತು ವಿಷ್ಣುರಹಸ್ಯದೊಳು ಭೃಗು ಮುನಿಪ ಇಂದ್ರದ್ಯುಮ್ನಗರುಪಿದದನು,
ಬುಧರು ಕೇಳುವುದು ನಿತ್ಯದಿ ಮತ್ಸರವ ಬಿಟ್ಟು,
ಅನುಚಿತೋಕ್ತಿಗಳಿದ್ದರೆಯು ಸರಿ, ಗಣನೆ ಮಾಡದಿರೆಂದು ವಿದ್ವಜ್ಜನಕೆ ವಿಜ್ಞಾಪನೆಯ ಮಾಡುವೆ,
ವಿನಯಪೂರ್ವಕದಿ ॥ ೧೪ ॥

ವೀತಭಯ–ವಿಶ್ವೇಶ–ವಿಧಿಪಿತ–ಮಾತುಳಾಂತಕ–ಮಧ್ವವಲ್ಲಭ–ಭೂತಭಾವನ–
ಅನಂತ ಭಾಸ್ಕರ ತೇಜ–ಮಹರಾಜ,
ಗೌತಮನ ಮಡದಿಯನು ಕಾಯ್ದಾನಾಥರಕ್ಷಕ,
ಗುರುತಮ ಜಗನ್ನಾಥ ವಿಠಲ ತನ್ನನಂಬಿದ ಭಕುತರನು ಪೊರೆವ ॥ ೧೫ ॥

॥ ಇತಿ ಶ್ರೀ ಸ್ವಗತಸ್ವಾತಂತ್ರ್ಯ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

॥ ೧೮. ಶ್ರೀ ಬಿಂಬಾಪರೋಕ್ಷ ಸಂಧಿ ॥

॥ ೧೮. ಶ್ರೀ ಬಿಂಬೋಪಾಸನ ಸಂಧಿ ॥

॥ ೧೮. ಶ್ರೀ ಬಿಂಬ ಪ್ರತಿಬಿಂಬ ಸಂಧಿ ॥

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ,
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥

ಮುಕ್ತ ಬಿಂಬನು ತುರಿಯ, ಜೀವನ್ಮುಕ್ತ ಬಿಂಬನು ವಿಶ್ವ,
ಶ್ರುತಿ ಸಂಸಕ್ತ ಬಿಂಬನು ತೈಜಸನು, ಅಸೃಜ್ಯರಿಗೆ ಪ್ರಾಜ್ಞ,
ಶಕ್ತನಾದರು ಸರಿಯೆ ಸರ್ವೋದ್ರಿಕ್ತ ಮಹಿಮನು ದು:ಖ ಸುಖಗಳ– ।
ವಕ್ತೃ ಮಾಡುತಲಿಪ್ಪ ಕಲ್ಪಾಂತದಲಿ ಬಪ್ಪರಿಗೆ ॥ ೧ ॥

ಅನ್ನನಾಮಕ ಪ್ರಕೃತಿಯೊಳಗಚ್ಛಿನ್ನನಾಗಿಹ ಪ್ರಾಜ್ಞನಾಮದಿ,
ಸೊನ್ನೊಡಲ ಮೊದಲಾದವರೊಳನ್ನಾದ ತೈಜಸನು,
ಅನ್ನದಾಂಬುದನಾಭ ವಿಶ್ವನು,
ಭಿನ್ನನಾಮ ಕ್ರಿಯೆಗಳಿಂದಲಿ ತನ್ನೊಳಗೆ ತಾರಮಿಪ ಪೂರ್ಣಾನಂದ ಜ್ಞಾನಮಯ ॥ ೨ ॥

ಬೂದಿಯೊಳಗಡಗಿಪ್ಪನಳನೋಪಾದಿ ಚೇತನ ಪ್ರಕೃತಿಯೊಳು,
ಅನ್ನಾದ ಅನ್ನಾಹ್ವಯದಿ ಕರೆಸುವ ಬ್ರಹ್ಮಶಿವರೂಪಿ,
ಓದನಪ್ರದ ವಿಷ್ಣು ಪರಮಾಹ್ಲಾದ ವೀವುತ ತೃಪ್ತಿ ಬಡಿಸುವ,
ಅಗಾಧ ಮಹಿಮನ ಚಿತ್ರ ಕರ್ಮವನಾವ ಬಣ್ಣಿಸುವ ॥ ೩ ॥

ನಾದಭೋಜನ ಶಬ್ದದೊಳು, ಬಿಂದೋದನೋದಕದೊಳಗೆ, ಘೋಷ ಅನು ವಾದದೊಳು,
ಶಾಂತಾಖ್ಯ ಜಠರಾಗ್ನಿಯೊಳಗಿರುತಿಪ್ಪ,
ವೈದಿಕ ಸುಶಬ್ದದೊಳು ಪುತ್ರ ಸಹೋದರಾನುಗರೊಳು ಅತಿ ಶಾಂತನ–
ಪಾದ ಕಮಲನವರತ ಚಿಂತಿಸು ಈ ಪರಿಯಲಿಂದ ॥ ೪ ॥

ವೇದಮಾನಿ ರಮಾನುಪಾಸ್ಯ–ಗುಣೋದಧಿ–ಗುಣತ್ರಯ ವಿವರ್ಜಿತ–
ಸ್ವೋದರಸ್ಥಿತ–ನಿಖಿಳ ಬ್ರಹ್ಮಾಂಡಾದ್ವಿಲಕ್ಷಣನು,
ಸಾಧು ಸಮ್ಮತ ವೆನಿಸುತಿಹ ನಿಷುಸೀದ ಗಣಪತಿಯೆಂಬ ಶ್ರುತಿ ಪ್ರತಿಪಾದಿಸುವದು–
ಅನವರತವನ ಗುಣ ಪ್ರಾಂತಗಾಣದಲೆ ॥ ೫ ॥

ಕರೆಸುವನು ಮಾಯಾರಮಣ ತಾ ಪುರುಷರೂಪದಿ ತ್ರಿಸ್ಥಳಗಳೊಳು,
ಪರಮ ಸತ್ಪುರುಷಾರ್ಥದ ಮಹತ್ತತ್ವದೊಳಗಿದ್ದು,
ಸರಸಿಜ ಭವಾಂಡಸ್ಥಿತ ಸ್ತ್ರೀ ಪುರುಷ ತನ್ಮಾತ್ರಗಳ–
ಏಕೋತ್ತರ ದಶೇಂದ್ರಿಯಗಳ ಮಹಾಭೂತಗಳ ನಿರ್ಮಿಸಿದ ॥ ೬ ॥

ಈ ಶರೀರಗ ಪುರುಷ ತ್ರಿಗುಣದಿ ಸ್ತ್ರೀಸಹಿತ ತಾನಿದ್ದು,
ಜೀವರಿಗಾಶೆ ಲೋಭ–ಅಜ್ಞಾನ–ಮದ–ಮತ್ಸರ–ಕುಮೋಹ–ಕ್ಷುಧ–
ಹಾಸ–ಹರ್ಷ–ಸುಷುಪ್ತಿ–ಸ್ವಪ್ನ–ಪಿಪಾಸ–ಜಾಗ್ರತಿ–ಜನ್ಮ–ಸ್ಥಿತಿ–ಮೃತಿ–
ದೋಷ–ಪುಣ್ಯ–ಜಯ–ಅಪಜಯ ದ್ವಂದ್ವಗಳ ಕಲ್ಪಿಸಿದ ॥ ೭ ॥

ತ್ರಿವಿಧ ಗುಣಮಯ ದೇಹ ಜೀವಕೆ ಕವಚದಂದದಿ ತೊಡಿಸಿ,
ಕರ್ಮ ಪ್ರವಹದೊಳು ಸಂಚಾರ ಮಾಡಿಸುತಿಪ್ಪ ಜೀವರನಾ,
ಕವಿಸಿ ಮಾಯಾರಮಣ ಮೋಹವ ಭವಕೆ ಕಾರಣನಾಗುವನು,
ಸಂಶ್ರವಣ ಮನನವ ಮಾಳ್ಪರಿಗೆ ಮೋಚಕನೆನಿಸುತಿಪ್ಪ ॥ ೮ ॥

ಸಾಶನಾಹ್ವಯ ಸ್ತ್ರೀ ಪುರುಷರೊಳು ವಾಸವಾಗಿಹನೆಂದರಿದು ವಿಶ್ವಾಸ ಪೂರ್ವಕ,
ಭಜಿಸಿ ತೋಷಿಸು ಸ್ವಾವರೋತ್ತಮರ,
ಕ್ಲೇಶ ನಾಶನ ಅಚಲಗಳೊಳು ಪ್ರಕಾಶಿಸುತಲಿಹ,
ಅನಶನ ರೂಪೋಪಾಸನವ ಮಾಳ್ಪರಿಗೆ ತೋರ್ಪನು ತನ್ನ ನಿಜರೂಪ ॥ ೯ ॥

ಪ್ರಕಾರಾಂತರ ಚಿಂತಿಸುವದೀ ಪ್ರಕೃತಿಯೊಳು ವಿಶ್ವಾದಿರೂಪವ,
ಪ್ರಕಟ ಮಾಳ್ಪೆನು ಯಥಾಮತಿಯೊಳು ಗುರುಕೃಪಾಬಲದಿ,
ಮುಕುರನಿರ್ಮಿತ ಸದನದೊಳು ಪೊಗೆಸ್ವಕಿಯ ರೂಪವ ಕಾಂಬ ತೆರದಂತೆ,
ಅಕುಟಿಲಾತ್ಮ ಚರಾಚರದಿ ಸರ್ವತ್ರ ತೋರುವನು ॥ ೧೦ ॥

ಪರಿಚ್ಛೇದತ್ರಯ ಪ್ರಕೃತಿಯೊಳಗಿರುತಿಹನು ವಿಶ್ವಾದಿ ರೂಪಕ,
ಧರಿಸಿ ಆತ್ಮಾದಿ ತ್ರಿರೂಪವ ಈಷಣತ್ರಯದಿ,
ಸುರುಚಿ ಜ್ಞಾನಾತ್ಮ ಸ್ವರೂಪದಿ ತುರಿಯ ನಾಮಕ ವಾಸುದೇವನ ಸ್ಮರಿಸು–
ಮುಕ್ತಿ ಸುಖಪ್ರದಾಯಕ ನೀತನಹುದೆಂದು ॥ ೧೧ ॥

ಕಮಲಸಂಭವ ಜನಕ ಜಡ ಜಂಗಮರೊಳಗೆ ನೆಲೆಸಿದ್ದು–
ಕ್ರಮವ್ಯುತ್ಕ್ರಮದಿ ಕರ್ಮವ ಮಾಡಿ ಮಾಡಿಸುತಿಪ್ಪ ಬೇಸರದೆ,
ಕ್ಷಮ ಕ್ಷಾಮ ಕ್ಷಮೀಹನಾಹ್ವಯ ಸುಮನಸಾಸುರರೊಳಗೆ–
ಅಹಂ ಮಮ ನಮಮ ಎಂದೀ ಉಪಾಸನೆ ಈವ ಪ್ರಾಂತದಲಿ ॥ ೧೨ ॥

ಈ ಸಮಸ್ತ ಜಗತ್ತು ಈಶಾವಾಸ್ಯವೆನಿಪುದು,
ಕಾರ್ಯರೂಪವು ನಾಶವಾದರು ನಿತ್ಯವೇ ಸರಿ ಕಾರಣ ಪ್ರಕೃತಿ,
ಶ್ರೀಶಗೆ ಜಡ ಪ್ರತಿಮೆ ಯೆನಿಪುದು ಮಾಸದೊಮ್ಮಿಗು ಸನ್ನಿಧಾನವು,
ವಾಸವಾಗಿಹ ನಿತ್ಯ ಶಾಲಗ್ರಾಮದೋಪಾದಿ ॥ ೧೩ ॥

ಏಕಮೇವಾದ್ವಿತೀಯ ರೂಪಾನೇಕ ಜೀವರೊಳಿದ್ದು,
ತಾ ಪ್ರತ್ಯೇಕ ಕರ್ಮವ ಮಾಡಿ ಮೋಹಿಸುತಿಪ್ಪ ತಿಳಿಸದಲೆ,
ಮೂಕ ಬಧಿರಾಂಧಾದಿ ನಾಮಕ ಈ ಕಳೇವರದೊಳಗೆ ಕರೆಸುವ,
ಮಾಕಳತ್ರನ ಲೌಕಿಕ ಮಹಾಮಹಿಮೆಗೇನೆಂಬೆ ॥ ೧೪ ॥

ಲೋಕಬಂಧುರ್ಲೋಕನಾಥ ವಿಶೋಕಭಕ್ತರ ಶೋಕನಾಶನ,
ಶ್ರೀಕರಾರ್ಚಿತ ಸೋಕದಂದದಲಿಪ್ಪ ಸರ್ವರೊಳು,
ಸಾಕುವನು ಸಜ್ಜನರ ಪರಮ ಕೃಪಾಕರೇಶ ಪಿನಾಕಿಸನ್ನುತ,
ಸ್ವೀಕರಿಸುವಾನತರು ಕೊಟ್ಟ ಸಮಸ್ತ ಕರ್ಮಗಳ ॥ ೧೫ ॥

ಆಹಿತ ಪ್ರತಿಮೆಗಳೆನಿಸುವವು ದೇಹಗೇಹಾಪತ್ಯ ಸತಿಧನ ಲೋಹಕಾಷ್ಠ–
ಶಿಲಾಮೃದಾತ್ಮಕವಾದ ದ್ರವ್ಯಗಳು,
ನೇಹ್ಯದಲಿ ಪರಮಾತ್ಮ ಎನಗಿತ್ತೀಹನೆಂದರಿದನುದಿನದಿ–
ಸರ್ವ್ಮೋಹಕೊಳಗಾಗದಲೆ ಪೂಜಿಸು ಸರ್ವನಾಮಕನ ॥ ೧೬ ॥

ಶ್ರೀತರುಣಿ ವಲ್ಲಭಗೆ ಜೀವರು ಚೇತನ ಪ್ರತಿಮೆಗಳು,
ಓತಪ್ರೋತನಾಗಿದ್ದೆಲ್ಲರೊಳು ವ್ಯಾಪಾರ ಮಾಡುತಿಹ,
ಹೋತ ಸರ್ವೇಂದ್ರಿಯಗಳೊಳು ಸಂಪ್ರೀತಿಯಿಂದುಂಡುಣಿಸಿ ವಿಷಯ,
ನಿರ್ವಾತ ದೇಶಗ ದೀಪದಂದದಲಿಪ್ಪ ನಿರ್ಭಯದಿ ॥ ೧೭ ॥

ಭೂತಸೋಕಿದ ಮಾನವನು ಬಹು ಮಾತನಾಡುವ ತೆರದಿ,
ಮಹಾಭೂತ ವಿಷ್ಣ್ವಾವೇಶದಿಂದಲಿ ವರ್ತಿಪುದು ಜಗವು,
ಕೈತವೋಕ್ತಿಗಳಲ್ಲ ಶೇಷ ಫಣಾತ ಪತ್ರಗೆ–
ಜೀವ ಪಂಚಕ ವ್ರಾತವೆಂದಿಗು ಭಿನ್ನಪಾದಾಹ್ವಯದಿ ಕರೆಸುವದು ॥ ೧೮ ॥

ದಿವಿಯೊಳಿಪ್ಪುವು ಮೂರು ಪಾದಗಳು, ಅವನಿಯೊಳಗಿಹುದೊಂದು,
ಈ ವಿಧ ಕವಿಭಿರೀಡಿತ ಕರೆಸುವ ಚತುಷ್ಪಾತು ತಾನೆಂದು,
ಇವನ ಪಾದ ಚತುಷ್ಟಯಗಳನು ಭವಕೆ ತಂದು ನಿರಂತರದಿ,
ಉದ್ಧವನ ಸಖ ಸರ್ವಾಂತರಾತ್ಮಕನೆಂದು ಸ್ಮರಿಸುತಿರು ॥ ೧೯ ॥

ವಂಶಬಾಗಲು ಬೆಳೆಯೆ ಕಂಡು ನರಾಂಶದಲಿ ಶೋಭಿಪುದು,
ಬಾಗದ ವಂಶ ಪಾಶದಿ ಕಟ್ಟಿ ಏರುವ ಡೊಂಬ ಮಸ್ತಕಕೆ,
ಕಂಸಮರ್ದನ ದಾಸರಿಗೆ ನಿಸ್ಸಂಶಯದಿ ಎರಗದಲೆ–
ನಾ ವಿದ್ವಾಂಸನೆಂದಹಂಕರಿಸೆ ಭವಗುಣದಿ ಬಂಧಿಸುವ ॥ ೨೦ ॥

ಜ್ಯೋತಿರೂಪಗೆ ಪ್ರತಿಮೆಗಳು ಸಾಂಕೇತಿಕಾರೋಪಿತ,
ಸುಪೌರುಷ ಧಾತು ಸಪ್ತಕ ಧೈರ್ಯಶೌರ್ಯೋದಾರ್ಯ ಚಾತುರ್ಯ,
ಮಾತುಮಾನ ಮಹತ್ವ ಸಹನ ಸುನೀತಿ ನಿರ್ಮಲ ದೇಶ ಬ್ರಾಹ್ಮಣ–
ಭೂತ ಪಂಚಕ ಬುದ್ಧಿ ಮೊದಲಾದಿಂದ್ರಿಯಸ್ಥಾನ ॥ ೨೧ ॥

ಜೀವರಾಶಿಯೊಳಮೃತ ಶಾಶ್ವತ, ಸ್ಥಾವರಗಳೊಳು ಸ್ಥಾಣು ನಾಮಕ,
ಆವಕಾಲದಲಿಪ್ಪ ಅಜಿತಾನಂತನೆಂದೆನಿಸಿ,
ಗೋವಿದಾಂಪತಿ ಗಾಯನಪ್ರಿಯ ಸಾವಯುವ ಸಾಹಸ್ರನಾಮ–
ಪರಾವರೇಶ ಪವಿತ್ರಕರ್ಮ ವಿಪಶ್ಚಿತ ಸುಸಾಮ ॥ ೨೨ ॥

ಮಾಧವನ ಪೂಜಾರ್ಥವಾಗಿ ನಿಷೇಧ ಕರ್ಮವ ಮಾಡಿ ಧನ ಸಂಪಾದಿಸಲು
ಸತ್ಪುಣ್ಯ ಕರ್ಮಗಳೆನಿಸಿಕೊಳುತಿಹವು,
ಸೋದರಂಭರಣಾರ್ಥ ನಿತ್ಯದಿ ಸಾಧುಕರ್ಮವ ಮಾಡಿದರು ಸರಿ, ।
ಯೈದುವನು ದೇಹಾಂತರವ ಸಂದೇಹವಿನಿತಿಲ್ಲ ॥ ೨೩ ॥

ಅಪಗತಾಶ್ರಯ ಎಲ್ಲರೊಳಗಿದ್ದುಪಮನೆನಿಪಾನುಪಮ ರೂಪನು,
ಶಫರಕೇತನ ಜನಕ ಮೋಹಿಪ ಮೋಹಕನ ತೆರದಿ,
ತಪನಕೋಟಿ ಸಮಪ್ರಭಾಸಿತ ವಪುವೆನಿಪ ಕೃಷ್ಣಾದಿ ರೂಪಕ,
ವಿಪಗಳಂತುಂಡುಣಿಪ ಸರ್ವತ್ರದಲಿ ನೆಲೆಸಿದ್ದು ॥ ೨೪ ॥

ಅಡವಿಯೊಳು ಬಿತ್ತದಲೆ ಬೆಳೆದಿಹ ಗಿಡದ ಮೂಲಿಕೆ,
ಸಕಲ ಜೀವರ ಒಡಲೊಳಿಪ್ಪಾಮಯುವ ಪರಿಹರಗೈಸುವಂದದಲಿ,
ಜಡಜ ಸಂಭವ ಜನಕ ತ್ರಿಜಗದ್ವಡೆಯ ಸಂತೈಸೆನಲು,
ಅವರಿದ್ದೆಡೆಗೆ ಬಂದೊದಗುವನು ಭಕ್ತರಭಿಡೆಯ ಮೀರದಲೆ ॥ ೨೫ ॥

ಶ್ರೀನಿಕೇತನ ತನ್ನವರ ದೇಹಾನುಬಂಧಿಗಳಂತೆ ಅವ್ಯವಧಾನದಲಿ ನೆಲೆಸಿಪ್ಪ–
ಸರ್ವದ ಸಕಲ ಕಾಮದನು,
ಏನು ಕೊಟ್ಟರು ಭುಂಜಿಸುತ ಮದ್ದಾನೆ ಯೆಂದದಿ ಸಂಚರಿಸು,
ಮತ್ತೇನು ಬೇಡದೆ ಭಜಿಸುತಿರು ಅವನಂಘ್ರಿಕಮಲಗಳ ॥ ೨೬ ॥

ಬೇಡದಲೆ ಕೊಡುತಿಪ್ಪ ಸುರರಿಗೆ, ಬೇಡಿದರೆ ಕೊಡುತಿಹನು ನರರಿಗೆ,
ಬೇಡಿಬಳಲುವ ದೈತ್ಯರಿಗೆ ಕೊಡನೊಮ್ಮೆ ಪುರುಷಾರ್ಥ,
ಮೂಢರನುದಿನ ಧರ್ಮ ಕರ್ಮವ ಮಾಡಿದರು ಸರಿ,
ಅಹಿಕ ಫಲಗಳ ನೀಡಿ ಉನ್ಮತ್ತರನು ಮಾಡಿ ಮಹಾ ನಿರಯವೀವ ॥ ೨೭ ॥

ತರಣಿ ಸರ್ವತ್ರದಲಿ ಕಿರಣವ ಹರಹಿ ತತ್ತದ್ವಸ್ತುಗಳ ಅನುಸರಿಸಿ-
ಅದರದರಂತೆ ಛಾಯವ ಕಂಗೊಳಿಪ ತೆರದಿ,
ಅರಿಧರ-ಏಜಾನೇಜ ಜಗದೊಳಗಿರುವ ಛಾಯಾ ತಪವೆನಿಸಿ-
ಸಂಕರುಷಣಾಹ್ವಯ ಅವರವರ ಯೋಗ್ಯತೆಗಳಂತಿಪ್ಪ ॥ ೨೮ ॥

ಈ ವಿಧದಿ ಸರ್ವತ್ರ ಲಕ್ಷ್ಮೀ ಭೂವನಿತೆಯರ ಕೂಡಿ,
ತನ್ನ ಕಳಾವಿಶೇಷಗಳೆಲ್ಲ ಕಡೆಯಲಿ ತುಂಬಿ ಸೇವ್ಯತಮ,
ಸೇವಕನು ತಾನೆನಿಸಿ ಮಾಯಾದೇವಿರಮಣ ಪ್ರವಿಷ್ಟ ರೂಪವ ಸೇವೆ ಮಾಳ್ಪ,
ಶರಣ್ಯ ಶಾಶ್ವತಕರುಣಿ ಕಮಲಾಕ್ಷ ॥ ೨೯ ॥

ಪ್ರಣವ ಕಾರಣ ಕಾರ್ಯ ಪ್ರತಿಪಾದ್ಯನು-ಪರಾತ್ಪರ-
ಚೇತನಾಚೇತನ ವಿಲಕ್ಷಣ-ಅನಂತ ಸತ್ಕಲ್ಯಾಣ ಗುಣಪೂರ್ಣ-
ಅನುಪಮನು-ಉಪಾಸಿತ-ಗುಣೋದಧಿ-ಅನಘ-ಅಜಿತ-ಅನಂತ-
ನಿಷ್ಕಿಂಚನ ಜನಪ್ರಿಯ-ನಿರ್ವಿಕಾರ-ನಿರಾಶ್ರಯಾವ್ಯಕ್ತಾ ॥ ೩೦ ॥

ಗೋಪಭೀಯ ಭವಾಂಧಕಾರಕೆ ದೀಪವಟ್ಟಿಗೆ,
ಸಕಲ ಸುಖ ಸದನೋಪರಿಗ್ರಹವೆನಿಸುತಿಪ್ಪುದು ಹರಿಕಥಾಮೃತವು,
ಗೋಪತಿ ಜಗನ್ನಾಥ ವಿಠಲ ಸಮೀಪದಲಿ ನೆಲೆಸಿದ್ದು,
ಭಕ್ತರನಾಪವರ್ಗರ ಮಾಡುವನು ಮಹದು:ಖಭಯದಿಂದ ॥ ೩೧ ॥

॥ ಇತಿ ಶ್ರೀ ಬಿಂಬಾಪರೋಕ್ಷ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

## ॥ ೧೯. ಶ್ರೀ ಗುಣತಾರತಮ್ಯ ಸಂಧಿ ॥

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ,
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥

ಶ್ರೀಧರಾದುರ್ಗಾಮನೋರಮ, ವೇಧಮುಖ ಸುಮನಸಗಣ ಸಮಾರಾಧಿತ ಪದಾಂಭೋಜ,
ಜಗದಂತರ್ಬಹಿರ್ವ್ಯಾಪ್ತ,
ಗೋಧರ ಫಣಿಪ ವರಾತಪತ್ರ, ನಿಷೇಧ ಶೇಷ, ವಿಚಿತ್ರಕರ್ಮ,
ಸುಬೋಧ ಸುಖಮಯಗಾತ್ರ ಪರಮಪವಿತ್ರ ಸುಚರಿತ್ರ ॥ ೧ ॥

ನಿತ್ಯ ನಿರ್ಮಲ ನಿಗಮವೇದ್ಯೋತ್ಪತ್ತಿ ಸ್ಥಿತಿಲಯ ದೋಷವರ್ಜಿತ,
ಸ್ತುತ್ಯ ಪೂಜ್ಯ ಪ್ರಸಿದ್ಧ ಮುಕ್ತಾಮುಕ್ತ ಗಣಸೇವ್ಯ,
ಸತ್ಯಕಾಮ ಶರಣ್ಯ ಶಾಶ್ವತ, ಭೃತ್ಯವತ್ಸಲ ಭಯ ನಿವಾರಣ,
ಅತ್ಯಧಿಕ ಸಂಪ್ರಿಯತಮ ಜಗನ್ನಾಥ ಮಾಂ ಪಾಹಿ ॥ ೨ ॥

ಪರಮ ಪುರುಷನ ರೂಪ ಗುಣವ ಅನುಸರಿಸಿ ಕಾಂಬಳು ಪ್ರವಹದಂದದಿ,
ನಿರುಪಮಳು ನಿರ್ದುಷ್ಟಸುಖಸಂಪೂರ್ಣಳೆನಿಸುವಳು,
ಹರಿಗೆ ಧಾಮತ್ರಯಳೆನಿಸಿ, ಆಭರಣ ವಸನಾಯುಧಗಳಾಗಿದ್ದು,
ಅರಿಗಳನು ಸಂಹರಿಸುವಳು ಅಕ್ಷರಳೆನಿಸಿಕೊಂಡು ॥ ೩ ॥

ಈತಗಿಂತಾನಂತಗುಣದಲಿ ಶ್ರೀತರುಣಿ ತಾ ಕಡಿಮೆಯೆನಿಪಳು,
ನಿತ್ಯ ಮುಕ್ತಳು ನಿರ್ವಿಕಾರಳು ತ್ರಿಗುಣವರ್ಜಿತಳು,
ಧೌತಪಾಪ ವಿರಿಂಚಿ ಪವನರ ಮಾತೆಯೆನಿಪ ಮಹಾಲಕುಮಿ,
ವಿಖ್ಯಾತಳಾಗಿಹಳೆಲ್ಲ ಕಾಲದಿ ಶ್ರುತಿ ಪುರಾಣದೊಳು ॥ ೪ ॥

ಕಮಲಸಂಭವ ಪವನರೀರ್ವರು ಸಮರು–ಸಮವರ್ತಿಗಳು,
ರುದ್ರಾದ್ಯಮರಗಣ ಸೇವಿತರು ಅಪರಬ್ರಹ್ಮನಾಮಕರು,
ಯಮಳರಿಗೆ ಮಹಲಕ್ಷ್ಮಿ ತಾನುತ್ತಮಳು ಕೋಟಿ ಸಜಾತಿ ಗುಣದಿಂದ,
ಅಮಿತ ಸುವಿಜಾತ್ಯಧಮರೆನಿಪರು ಬ್ರಹ್ಮವಾಯುಗಳು ॥ ೫ ॥

ಪತಿಗಳಿಂದ ಸರಸ್ವತೀ ಭಾರತಿಗಳಧಮರು ನೂರುಗುಣಪರಿಮಿತ ವಿಜಾತ್ಯವರರು,
ಬಲಜ್ಞಾನಾದಿಗುಣದಿಂದ ಅತಿಶಯರು ವಾಗ್ದೇವಿ ಶ್ರೀಭಾರತಿಗೆ,
ಪದಪ್ರಯುಕ್ತ ವಿಧಿಮಾರುತರವೋಲ್ಚಿಂತಿಪುದು–
ಸದ್ಭಕ್ತಿಯಲಿ ಕೋವಿದರು ॥ ೬ ॥

ಖಗಪ ಫಣಿಪತಿ ಮೃಡರು ಸಮ, ವಾಣಿಗೆ ಶತ ಗುಣಾವರರು ಮೂವರು,
ಮಿಗಿಲೆನಿಸುವನು ಶೇಷ ಪದದಿಂದಲಿ ತ್ರಿಯಂಬಕಗೆ,
ನಗಧರನ ಷಣ್ಮಹಿಷಿಯರು ಪನ್ನಗ ವಿಭೂಷಣಗೈದು,
ಮೇನಕಿ ಮಗಳು ವಾರುಣಿ ಸೌಪರಣಿಗಳಿಗಧಿಕವೆರಡು ಗುಣ ॥ ೭ ॥

ಗರುಡಶೇಷ ಮಹೇಶರಿಗೆ ಸೌಪರಣಿ ವಾರುಣಿ ಪಾರ್ವತಿ ಮೂವರು ದಶಾಧಮ,
ವಾರುಣಿಗೆ ಕಡಿಮೆನಿಸುವಳು ಗೌರೀ,
ಹರನ ಮಡದಿಗೆ ಹತ್ತು ಗುಣದಲಿ ಸುರಪ ಕಾಮರು ಕಡಿಮೆ,
ಇಂದ್ರಗೆ ಕೊರತೆಯೆನಿಸುವ ಮನ್ಮಥನು ಪದದಿಂದಲಾವಾಗ ॥ ೮ ॥

ಈರಯಿದು ಗುಣ ಕಡಿಮೆ ಆಹಂಕಾರಿಕ ಪ್ರಾಣನು ಮನೋಜ ನಗಾರಿಗಳಿಗೆ,
ಅನಿರುದ್ಧ ರತಿ ಮನು ದಕ್ಷ ಗುರು ಶಚಿಯು ಆರು ಜನ ಸಮ–
ಪ್ರಾಣನಿಂದಲಿ ಹೌರಗೆನಿಪರು ಹತ್ತು ಗುಣದಲಿ,
ಮಾರಜಾದ್ಯರಿಗೈದುಗುಣದಿಂದಧಮ ಪ್ರವಹಾಖ್ಯ ॥ ೯ ॥

ಗುಣದ್ವಯದಿಂ ಕಡಿಮೆ ಪ್ರವಹಗೆ ಇನ ಶಶಾಂಕ ಯಮ–
ಸ್ವಯಂಭುವ ಮನು ಮಡದಿ ಶತರೂಪ ನಾಲ್ವರು,
ಪಾದ ಪಾದಾರ್ಧ ವನಧಿ ನೀಚ, ಪಾದಾರ್ಧ ನಾರದ,
ಮುನಿಗೆ ಭೃಗ್ವಗ್ನಿ ಪ್ರಸೂತಿಗಳೆನಿಸುವರು ಪಾದಾರ್ಧ ಗುಣದಿಂದಧಮರಹುದೆಂದು ॥ ೧೦ ॥

ಹುತವಹಗೆ ದ್ವಿಗುಣಾಧಮರು ವಿಧಿ ಸುತ ಮರೀಚ್ಯಾದಿಗಳು,
ವೈವಸ್ವತನು ವಿಶ್ವಾಮಿತ್ರರಿಗೆ ಕಿಂಚಿದ್ಗುಣಾಧಮನು,
ವ್ರತಿವರ ಜಗನ್ಮಿತ್ರವರ ನಿರಋತಿ ಪ್ರಾವಹಿ ತಾರರಿಗೆ–
ಕಿಂಚಿತು ಗುಣಾಧಮ ಧನಪವಿಷ್ವಕ್ಸೇನರೆನಿಸುವರು ॥ ೧೧ ॥

ಧನಪ ವಿಷ್ವಕ್ಸೇನ ಗೌರೀತನಯರಿಗೆ ಉಕ್ತೇತರರು ಸಮರೆನಿಸುವರು–
ಎಂಭತ್ತಯಿದು ಜನ ಶೇಷಶತರೆಂದು,
ದಿನಪರಾರು, ಏಳಧಿಕ ನಾಲ್ವತ್ತನಿಲರು, ಏಳ್ವಸು,
ರುದ್ರರೀರೈದು, ಅನಿತು ವಿಶ್ವೇದೇವ, ಋಭು ಅಶ್ವಿನೀ ಪಿತೃ ಧರಣೀ ॥ ೧೨ ॥

ಇವರಿಗಿಂತಲಿ ಕೊರತೆಯೆನಿಪರು ಚ್ಯವನ ಸನಕಾದಿಗಳು ಪಾವಕ–
ಕವಿ ಉಚಿತ್ಥ್ಯ ಜಯಂತ ಕಶ್ಯಪ ಮನುಗಳೇಕದಶ–
ಧೃವ ನಹುಷ ಶಶಿಬಿಂದು ಹೈಹಯ ದೌಷ್ಯಂತಿ "ವಿರೋಚನನ ನಿಜ ಕುವರ"–
ಬಲಿ ಮೊದಲಾದ ಸಪ್ತೇಂದ್ರರು ಕಕುತ್ಸ್ಥಗಯ ॥ ೧೩ ॥

ಪೃಥು ಭರತ ಮಾಂಧಾತ ಪ್ರಿಯವ್ರತ ಮರುತ ಪ್ರಹ್ಲಾದ ಸುಪರೀಕ್ಷಿತ–
ಹರಿಶ್ಚಂದ್ರಾಂಬರೀಷೋತ್ತಾನಪಾದ ಮುಖ–
"ಶತಸುಪುಣ್ಯಶ್ಲೋಕರು ಗದಾಭೃತಗಧಿಷ್ಠಾನರು"–
ಸುಪ್ರಿಯವ್ರತಗೆ ದ್ವಿಗುಣಾಧಮರು ಕರ್ಮಜರೆಂದು ಕರೆಸುವರು ॥ ೧೪ ॥

ನಳಿನಿ ಸಂಜ್ಞಾ ರೋಹಿಣೀ ಶ್ಯಾಮಲ ವಿರಾಟ್ ಪರ್ಜನ್ಯರಧಮರು, ।
"ಯಲರು ಮಿತ್ರನ ಮಡದಿ" ದ್ವಿಗುಣಾಧಮಳು ಬಾಂಬೊಳಗೆ,
ಜಲಮಯ ಬುಧಾಧಮನು ದ್ವಿಗುಣದಿ, ಕೆಳಗೆನಿಸುವಳುಷಾ,
ಶನೈಶ್ಚರ ಇಳಿಗೆ ಈರು ಗುಣಾಧಮರು ಉಷಾದೇವಿ ದೆಶೆಯಿಂದಾ ॥ ೧೫ ॥

ಎರಡು ಗುಣ ಕರ್ಮಾಧಿಪತಿ ಪುಷ್ಕರ ಕಡಿಮೆ, ಆಜಾನು ದಿವಿಜರು ಚಿರಪಿತೃಗಳಿಂದುತ್ತಮರು–
ಕಿಂಕರರು ಪುಷ್ಕರಗೆ,
ಸುರಪನಾಲಯ ಗಾಯಕೋತ್ತಮ ಎರಡಯಿದು ಗುಣದಿಂದಧಮ,
ತುಂಬುರಗೆ ಸಮ ನೂರುಕೋಟಿಋಷಿಗಳು ನೂರುಜನರುಳಿದು ॥ ೧೬ ॥

ಅವರವರ ಪತ್ನಿಯರು ಅಪ್ಸರ ಯುವತಿಯರು ಸಮ,
ಉತ್ತಮರನುಳಿದವರರೆನಿಪರು ಮನುಜಗಂಧರ್ವರು ದ್ವಿಷಡ್ಗುಣದಿ,
ಕುವಲಯಾಧಿಪರೀರು, ಅಯಿದು ಗುಣ ಅವನಿಪ ಸ್ತ್ರೀಯರು,
ದಶೋತ್ತರ ನವತಿ ಗುಣದಿಂದಧಮರೆನಿಪರು ಮಾನುಷೋತ್ತಮರು ॥ ೧೭ ॥

ಸತ್ವಸತ್ವರು ಸತ್ವರಾಜಸ ಸತ್ವತಾಮಸ ಮೂವರು–
ರಜಸ್ಸತ್ವಾಧಿಕಾರಿಗಳು ಭಗವದ್ಭಕ್ತರೆನಿಸುವರು,
ನಿತ್ಯಬದ್ಧರು ರಜೋರಜರು–ಉತ್ಪತ್ತಿ ಭೂಸ್ವರ್ಗದೊಳು,
ನರಕದಿ ಪೃಥ್ವಿಯೊಳು ಸಂಚರಿಸುತಿಪ್ಪರು ರಜಸ್ತಾಮಸರು ॥ ೧೮ ॥

ತಮಸ್ಸಾತ್ವಿಕರೆನಿಸಿಕೊಂಬರು ಅಮಿತನಾಖ್ಯಾತಾಸುರರಗಣ,
ತಮೋರಾಜಸರೆನಿಸಿಕೊಂಬರು ದೈತ್ಯಸಮುದಾಯ,
ತಮಸುತಾಮಸ ಕಲಿಪುರಂಧ್ರಿಯು,
ಅಮಿತ ದುರ್ಗುಣಪೂರ್ಣ ಸರ್ವಾಧಮರೊಳಧಮಾಧಮ ದುರಾತ್ಮನು ಕಲಿಯೆನಿಸಿಕೊಂಬ ॥ ೧೯ ॥

ಇವನ ಪೋಲುವ ಪಾಪಿಜೀವರು ಭುವನ ಮೂವರೊಳಿಲ್ಲ ನೋಡಲು,
ನವವಿಧದ್ವೇಷಗಳಿಗಾಕಾರನೆನಿಸಿ ಕೊಳುತಿಪ್ಪ,
ಬವರದೊಳು ಬಂಗಾರದೊಳು "ನಟ ಯುವತಿ" ದ್ಯೂತಾಪೇಯ ಮೃಷದೊಳು ಕವಿಸಿ ಮೋಹದಿ–
ಕೆಡಿಸುವನು ಯೆಂದರಿದು ತ್ಯಜಿಸುವದು ॥ ೨೦ ॥

ತ್ರಿವಿಧ ಜೀವಪ್ರತತಿಗಳ ಸಗ್ಗವೊಳೆಯಾಣ್ಮಾಲಯನು ನಿರ್ಮಿಸಿ,
ಯುವತಿಯರ ವಡಗೂಡಿ ಕ್ರೀಡಿಸುವನು ಕೃಪಾಸಾಂದ್ರ,
ದಿವಿಜದಾನವ ತಾರತಮ್ಯದ ವಿವರ ತಿಳಿವ ಮಹಾತ್ಮರಿಗೆ,
ಬಾನ್ನವಿರಸಖ ತಾ ನೊಲಿದು ಉದ್ಧರಿಸುವನು ದಯದಿಂದ ॥ ೨೧ ॥

ದೇವ ದೈತ್ಯರ ತಾರತಮ್ಯವು ಪಾವಮಾನಿ ಮತಾನುಗರಿಗಿದು ಕೇವಲಾವಶ್ಯಕವು–
ತಿಳಿವುದು ಸರ್ವಕಾಲದಲಿ,
ದಾವಶಿಖಿ ಪಾಪಾಟವಿಗೆ, ನವ ನಾವೆಯೆನಿಪುದು ಭವಸಮುದ್ರಕೆ,
ಪಾವಟಿಗೆ ವೈಕುಂಠ ಲೋಕಕಿದೆಂದು ಕರೆಸುವದು ॥ ೨೨ ॥

ತಾರತಮ್ಯಜ್ಞಾನ ಮುಕ್ತಿ ದ್ವಾರವೆನಿಪುದು,
ಭಕ್ತ ಜನರಿಗೆ ತೋರಿ ಪೇಳಿ ಸುಖಾಬ್ಧಿಯೊಳು ಲೋಲ್ಯಾಡುವುದು ಬುಧರು,
ಕ್ರೂರಮಾನವರಿಗಿದು ಕರ್ಣ ಕಠೋರವೆನಿಪುದು,
ನಿತ್ಯದಲಿ ಅಧಿಕಾರಿಗಳಿಗಿದನರುಪುವುದು ದುಸ್ತರ್ಕಿಗಳ ಬಿಟ್ಟು ॥ ೨೩ ॥

ಹರಿಸಿರಿ ವಿರಿಂಚೀರ ಭಾರತಿ ಗರುಡ ಫಣಿಪತಿ ಷಣ್ಮಹಿಷಿಯರು-
ಗಿರಿಜ ನಾಕೇಶ ಸ್ಮರ ಪ್ರಾಣಾನಿರುದ್ಧ ಶಚೀದೇವಿ ಗುರು ರತೀಮನು ದಕ್ಷ-
ಪ್ರವಹಾ ಮರುತ ಮಾನವಿ ಯಮಶಶಿದಿವಾಕರ-
ವರುಣ ನಾರದ ಸುರಾಸ್ಯ ಪ್ರಸೂತಿ ಭೃಗು ಮುನಿಪ ॥ ೨೪ ॥

ವ್ರತತಿಜಾಸನ ಪುತ್ರರೆನಿಸುವ ವ್ರತಿವರ ಮರೀಚಾತ್ರಿ-
ವೈವಸ್ವತನು ತಾರಾಮಿತ್ರ ನಿರಋತಿ ಪ್ರವಹ ಮಾರುತನ ಸತಿ-
ಧನೇಶಾಶ್ವಿನಿಗಳಿರ್ ಗಣಪತಿಯು ವಿಷ್ವಕ್ಸೇನ ಶೇಷ ಸುಶತರು-
ಮನುಗಳುಚಿಥ್ಯಚಾವನ ಮುನಿಗಳಿಗೆ ನಮಿಪೆ ॥ ೨೫ ॥

ಶತಸುಪುಣ್ಯ ಶ್ಲೋಕರೆನಿಸುವ ಕ್ಷಿತಿಪರಿಗೆ ನಮಿಸುವೆನು,
ಭಾಗೀರಥಿ ವಿರಾಟ್ಪರ್ಜನ್ಯ ರೋಹಿಣಿ ಶ್ಯಾಮಲಾ ಸಂಜ್ಞಾ-
"ಹುತವಹನ ಮಹಿಳಾ" ಬುಧೋಷಾಕ್ಷಿತಿ ಶನೈಶ್ಚರ-
ಪುಷ್ಕರರಿಗಾನತಿಸಿ ಬಿನ್ನಯಿಸುವೆನು ಭಕ್ತಿ ಜ್ಞಾನ ಕೊಡಲೆಂದು ॥ ೨೬ ॥

ನೂರಧಿಕವಾಗಿಪ್ಪ ಮತ್ತಧಿನಾರು ಸಾವಿರ ನಂದಗೋಪ ಕುಮಾರನ ಅರ್ಧಾಂಗಿಯರು
ಅಗಸ್ತ್ಯಾದೀ ಮುನೀಶ್ವರರು-
"ಊರ್ವಶೀ ವೊದಲಾದ ಅಪ್ಸರ ನಾರಿಯರು" "ಶತ ತುಂಬುರರು"
ಕಂಸಾರಿ ಗುಣಗಳ ಕೀರ್ತನೆಯ ಮಾಡಿಸಲಿ ಎನ್ನಿಂದ ॥ ೨೭ ॥

ಪಾವನರು ಶುಚಿ ಶುದ್ಧನಾಮಕ ದೇವತೆಗಳು-ಆಜಾನ ಚಿರಪಿತೃ-
ದೇವನರಗಂಧರ್ವರು-ಅವನಿಪ ಮಾನುಷೋತ್ತಮರು-
ಈ ವಸುಮತಿಯೊಳುಳ್ಳ ವೈಷ್ಣವರಾವಳಿಯೊಳಿಹನೆಂದು,
ನಿತ್ಯದಿ ಸೇವಿಪುದು ಸಂತೋಷದಿಂ ಸರ್ವಪ್ರಕಾರದಲಿ ॥ ೨೮ ॥

ಮಾನುಷೋತ್ತಮರನ ವಿಡಿದು ಚತುರಾನನಾಂತ ಶತೋತ್ತಮತ್ವ-
ಕ್ರಮೇಣ ಚಿಂತಿಪ ಭಕ್ತರಿಗೆ ಚತುರವಿಧ ಪುರುಷಾರ್ಥ-
ಶ್ರೀನಿಧಿ ಜಗನ್ನಾಥ ವಿಠಲ ತಾನೆ ವೊಲಿದೀವನು-
ನಿರಂತರ ಸಾನುರಾಗದಿ ಪಠಿಸುವುದು ಸಂತರಿದ ಮರೆಯದಲೆ ॥ ೨೯ ॥

॥ ಇತಿ ಶ್ರೀ ಗುಣತಾರತಮ್ಯ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

## ॥ ೨೦. ಶ್ರೀ ಆರೋಹಣ ತಾರತಮ್ಯ ಸಂಧಿ ॥

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ,
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥

ಭಕ್ತರೆನಿಸುವ ದಿವ್ಯಪುರುಷರ ಉಕ್ತಿ ಲಾಲಿಸಿ ಪೇಳ್ದ–
ಮುಕ್ತಾಮುಕ್ತ ಜೀವರ ತಾರತಮ್ಯವ ಮುನಿಪ ಶಾಂಡಿಲ್ಯ ॥

ಸ್ಥಾವರರ ನೋಡಲ್ಕೆ ತೃಣಕ್ರಿಮಿ ಜೀವರುತ್ತಮ,
ಕ್ರಿಮಿಗಳಿಂದಲಿ ಆವಿಗೋಗಜ ವ್ಯಾಘ್ರಗಳಿಂದ ಶೂದ್ರಾದಿ ಮೂವರುತ್ತಮ,
ಕರ್ಮಿಕರ ಭೂದೇವರುತ್ತಮ, ಕರ್ಮಿ ನೋಡಲು ಕೋವಿದೋತ್ತಮ,
ಕವಿಗಳಿಂದಲಿ ಕ್ಷಿತಿಪರುತ್ತಮರು ॥ ೧ ॥

ಧರಣಿಪರ ನೋಡಲ್ಕೆ ನರ ಗಂಧರ್ವರುತ್ತಮ,
ದೇವ ಗಂಧರ್ವರ ಗುಣೋತ್ತಮರು, ಇವರಿಗಿಂತ ಶತೋನಶತಕೋಟಿ ಪರಮ ಋಷಿಗಳು,
ಅಪ್ಸರ ಸ್ತ್ರೀಯರು ಸಮಾನರು,
ಇವರಿಗಿಂತಲಿ ಚಿರ ಪಿತೃಗಳುತ್ತಮರು, ಚಿರನಾಮಕ ಪಿತೃಗಳಿಂದ– ॥ ೨ ॥

ಎರಡಯಿದು ಎಂಭತ್ತು ಋಷಿ ತುಂಬರಶತ ಊರ್ವಶಿ ಅಪ್ಸರ ಸ್ತ್ರೀಯರು–
ಶತಾಜಾನಜರು ಉತ್ತಮ ಚಿರಪಿತೃಗಳಿಂದ,
ಅವರರು ಊರ್ವಶಿಗಿಂತ ವೈಶ್ವಾನರನ ಸುತರೀರೆಂಟು ಸಾವಿರ,
ಹರದಿಯರೊಳುತ್ತಮ ಕಶೇರ್ಯೆಪ್ಪತ್ತು ನಾಲ್ಕುಜನ ॥ ೩ ॥

ಸರಿಯೆನಿಪರು ವ್ರಜೌಕಸ ಸ್ತ್ರೀಯರು, ಸುರಾಸ್ಯಾತ್ಮಜರಿಗಿಂ ಪುಷ್ಕರನು,
ಕರ್ಮಪ ಪುಷ್ಕರನಿಗೆ ಶನೈಶ್ಚರುತ್ತಮನು,
ತರಣಿಜನಿಗುತ್ತಮಳುಷ, ಅಶ್ವಿನಿ ಸುರರಸಿಗುತ್ತಮ ಜಲಪ ಬುಧ,
ಶರಧಿಜಾತ್ಮಜಗುತ್ತಮ ಸ್ವಹದೇವಿಯೆನಿಸುವಳು ॥ ೪ ॥

ಅನಳಭಾರ್ಯಳಿಗಿಂತ ಅನಾಖ್ಯಾತ ಅನಿಮಿಷೋತ್ತಮರು,
ಇವರಿಗಿಂತಲಿ ಘನಪ ಪರ್ಜನ್ಯಾನಿರುದ್ಧನ ಸ್ತ್ರೀ ಉಷಾದೇವಿ–
ದ್ಯುನದಿ ಸಂಜ್ಞಾ ಶಾಮಲಾ ರೋಹಿಣಿಗಳಾರ್ವರು ಸಮಾನ,
ಅನಾಖ್ಯಾತನಿಮಿಷೋತ್ತಮರು, ಇವರಿಗಿಂತಲಿ ನೂರು ಕರ್ಮಜರು ॥ ೫ ॥

ಪೃಥು ನಹುಷ ಶಶಿಬಿಂದು ಪ್ರಿಯವ್ರತ ಪರೀಕ್ಷಿತ ನೃಪರು
ಭಾಗೀರಥಿಯ ನೋಡಲ್ಕಧಿಕ, ಬಲ್ಯಾದಿಂದ್ರ ಸಪ್ತಕರು,
ಪಿತೃಗಳೇಳು, ಎಂಟಧಿಕ ಅಪ್ಸರ ಸತಿಯರು, ಈರೈದೊಂದು ಮನುಗಳು,
ದಿತಿಜಗುರು ಚಾವನ ಉಚಿತ್ಥ್ಯರು ಕರ್ಮಜರು ಸಮರು ॥ ೬ ॥

ಧನಪ ವಿಷ್ವಕ್ಸೇನ ಗಣಪಾಶ್ವಿನಿಗಳೆಂಭತ್ತೈದು ಶೇಷರಿಗೆಣೆಯೆನಿಸುವರು,
ಮಿತ್ರ ತಾರಾ ನಿರಋತಿ ಪ್ರಾವಹಿ ಗುಣಗಳಿಂದ–
ಐದಧಿಕ ಯೆಂಭತ್ತೆನಿಪ ಶೇಷರಿಗುತ್ತಮರು,
ಸನ್ಮುನಿ ಮರೀಚಿ ಪುಲಸ್ತ್ಯ ಪುಲಹಾಕ್ರತು ವಸಿಷ್ಠಮುಖ– ॥ ೭ ॥

ಅತ್ರಿ ಅಂಗಿರರೇಳು ಬ್ರಹ್ಮನ ಪುತ್ರರಿವರಿಗೆ ಸಮರು–
ವಿಶ್ವಾಮಿತ್ರ ವೈವಸ್ವತನು ಈಶಾವೇಶ ಬಲದಿಂದ,
ಮಿತ್ರಗಿಂತುತ್ತಮರು ಸ್ವಾಹಾ ಭರ್ತೃ ಭೃಗುವು ಪ್ರಸೂತಿ,
ವಿಶ್ವಾಮಿತ್ರ ಮೊದಲಾದವರಿಗಿಂತಲಿ ಮೂವರುತ್ತಮರು ॥ ೮ ॥

ನಾರದೋತ್ತಮನು ಅಗ್ನಿಗಿಂತಲಿ, ವಾರಿನಿಧಿ ಪಾದೋತ್ತಮನು,
ಯಮ ತಾರಕೇಶ ದಿವಾಕರರು ಶತರೂಪರುತ್ತಮರು,
ವಾರಿಜಾಪ್ತನಿಗಿಂತ ಪ್ರವಹಾ ಮಾರುತೊತ್ತಮ,
ಪ್ರವಹಗಿಂತಲಿ ಮಾರಪುತ್ರನಿರುದ್ಧ ಗುರು ಮನು ದಕ್ಷ ಶಚಿ ರತಿಯು ॥ ೯ ॥

ಆರು ಜನರುಗಳಿಂದಲಾಹಂಕಾರಿಕ ಪ್ರಾಣೋತ್ತಮ,
ಅಖಿಳ ಶರೀರಮಾನಿ ಪ್ರಾಣಗಿಂತಲಿ ಕಾಮ ಇಂದ್ರರಿಗೆ,
ಗೌರಿ ವಾರುಣಿ ಖಗಪ ರಾಣಿಗೆ, ಶೌರಿ ಮಹಿಷಿಯರೊಳಗೆ–
ಜಾಂಬವತೀ ರಮಾಯುತಳಾದ ಕಾರಣ ಅಧಿಕಳೆನಿಸುವಳು ॥ ೧೦ ॥

ಹರ ಫಣಿಪ ವಿಹಗೇಂದ್ರ ಮೂವರು ಹರಿ ಮಡದಿಯರಿಗುತ್ತಮ,
ಸೌಪರಣಿಪತಿಗುತ್ತಮರು ಭಾರತಿ ವಾಣಿ ಈರ್ವರಿಗೆ,
ಮರುತ ಬ್ರಹ್ಮರು ಉತ್ತಮರು, ಇಂದಿರೆಯು ಪರಮೋತ್ತಮಳು,
ಲಕ್ಷ್ಮಿಗೆ ಸರಿಯೆನಿಸುವವರಿಲ್ಲವೆಂದಿಗು ದೇಶಕಾಲದೊಳು ॥ ೧೧ ॥

ಶ್ರೀಮುಕುಂದನ ಮಹಿಳೆ ಲಕುಮಿ ಮಹಾಮಹಿಮೆಗೇನೆಂಬೆ,
ಬ್ರಹ್ಮೇಶಾಮರೇಂದ್ರರ ಸೃಷ್ಟಿ ಸ್ಥಿತಿ ಲಯಗೈಸಿ–
ಅವರವರ ಧಾಮಗಳ ಕಲ್ಪಿಸಿ ಕೊಡುವಳು,
ಅಜರಾಮರಣಳಾಗಿದ್ದು ಸರ್ವ ಸ್ವಾಮಿ ಮಮ ಗುರುವೆಂದುಪಾಸನೆ ಮಾಳ್ಪಳಚ್ಯುತನ ॥ ೧೨ ॥

ಈಸು ಮಹಿಮೆಗಳುಳ್ಳ ಲಕ್ಷ್ಮಿ, ಪರೇಶನನಂತಾನಂತ ಗುಣದೊಳು–
ಲೇಶಲೇಶಕೆ ಸರಿಯೆನಿಸಳಾವಾವ ಕಾಲದಲಿ,
ದೇಶಕಾಲಾತೀತ ಲಕ್ಷ್ಮಿಗೆ ಕೇಶವನ ವಕ್ಷಸ್ಥಳವೆ ಅವಕಾಶವಾಯಿತು,
ಇವನ ಮಹಿಮೆಗೆ ವ್ಯಾಪ್ತಿಗೆಣೆಯುಂಟೆ ॥ ೧೩ ॥

ಒಂದು ರೂಪದೊಳು, ಒಂದವಯುವದೊಳು, ಒಂದು ರೋಮದೊಳು,
ಒಂದು ದೇಶದಿ ಪೊಂದಿಕೊಂಡಿಹರು ಅಜಭವಾದಿ ಸಮಸ್ತ ಜೀವಗಣ,
ಸಿಂಧು ಸಪ್ತದ್ವೀಪ ಮೇರು ಸುಮಂದರಾದ್ರ್ಯಾದಿಗಳು–
ಬ್ರಹ್ಮ ಪುರಂದರಾದಿ ಸಮಸ್ತ ಲೋಕ ಪರಾಲಯಗಳೆಲ್ಲ ॥ ೧೪ ॥

ಸರ್ವ ದೇವೋತ್ತಮನು, ಸರ್ವಗ, ಸರ್ವ ಗುಣಸಂಪೂರ್ಣ, ಸರ್ವದ,
ಸರ್ವ ತಂತ್ರಸ್ವತಂತ್ರ, ಸರ್ವಾಧಾರ ಸರ್ವಾತ್ಮ,
ಸರ್ವತೋಮುಖ, ಸರ್ವನಾಮಕ, ಸರ್ವಜನ ಸಂಪೂಜ್ಯ, ಶಾಶ್ವತ,
ಸರ್ವಕಾಮದ, ಸರ್ವಸಾಕ್ಷಿಗ, ಸರ್ವಜಿತ್ಸರ್ವ ॥ ೧೫ ॥

ತಾರತಮ್ಯಾರೋಹಣವ ಬರೆದಾರು ಪಠಿಸುವರವರ,
ಲಕ್ಷ್ಮೀ ನಾರಸಿಂಹ ಸಮಸ್ತ ದೇವಗಣಾಂತರಾತ್ಮಕನು–
ಪೂರಯಿಸುವ ಮನೋರಥಂಗಳ, ಕಾರುಣಿಕ ಕೈವಲ್ಯದಾಯಕ,
ದೂರಗೈಪ ಸಮಸ್ತ ದುರಿತವ ವೀತಶೋಕ ಸುಖ ॥ ೧೬ ॥

ಪ್ರಣತ ಕಾಮದನಂಘ್ರಿ ಸಂದರುಶನದಪೇಕ್ಷೆಯು ಉಳ್ಳವಗೆ,
ನಿಚ್ಚಣಿಕೆ ಯೆನಿಪುದು ಜಡಮೊದಲು ಬ್ರಹ್ಮಾಂಡ ತರತಮವು,
ಮನವಚನದಿಂ ಸ್ಮರಿಸುವರ ಭವವನಧಿಶೋಷಿಸಿ ಪೋಗುವುದು,
ಕಾರಣವೆನಿಸುವುದು ಜ್ಞಾನ ಭಕ್ತಿ ವಿರಕ್ತಿ ಸಂಪದಕೆ ॥ ೧೭ ॥

ಅನಳನೊಳು ಹೋಮಿಸುವ ಹರಿಚಂದನವೆ ಮೊದಲಾದದರ ಸುವಾಸನೆಯು–
ಪ್ರತ್ಪ್ರತ್ಯೇಕ ತೋರ್ಪುದು ಎಲ್ಲ ಕಾಲದಲಿ,
ದನುಜ ಮಾನವ ದಿವಿಜರವರವರನುಚಿತೋಚಿತಕರ್ಮ–
ವೃಜಿನಾರ್ದನನು ವ್ಯಕ್ತಿಯ ಮಾಳ್ಪ ತ್ರಿಗುಣಾತೀತ ವಿಖ್ಯಾತ ॥ ೧೮ ॥

ಭಕ್ತವತ್ಸಲ ಭಾಗ್ಯ ಪುರುಷ ವಿವಿಕ್ತ ವಿಶ್ವಾಧಾರ ಸರ್ವೋದೃಕ್ತ,
ದೃಷ್ಟಾದೃಷ್ಟ ದುರ್ಗಮ ದುರ್ವಿಭಾವ್ಯ ಸ್ವಹಿ,
ಶಕ್ತ ಶಾಶ್ವತ ಸಕಲ ವೇದೈಕೋಕ್ತ, ಮಾನದ ಮಾನ್ಯ ಮಾಧವ,
ಸೂಕ್ತ ಸೂಕ್ಷ್ಮ ಸ್ಥೂಲ ಶ್ರೀ ಜಗನ್ನಾಥ ವಿಠಲನು ॥ ೧೯ ॥

॥ ಇತಿ ಶ್ರೀ ಆರೋಹಣ ತಾರತಮ್ಯ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

## ॥ ೨೧. ಶ್ರೀ ಕರ್ಮವಿಮೋಚನ ಸಂಧಿ ॥

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ,
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥

ಮೂಲ ನಾರಾಯಣನು ಮಾಯಾಲೋಲನಂತವತಾರನಾಮಕ,
ವ್ಯಾಳರೂಪ ಜಯಾರಮಣನಾವೇಶನೆನಿಸುವನು,
ಲೀಲೆಗೈವಾನಂತ ಚೇತನ ಜಾಲದೊಳು ಪ್ರದ್ಯುಮ್ನ,
ಬ್ರಹ್ಮಾಂಡಾಲಯದ ವೊಳಹೊರಗೆ ನೆಲೆಸಿಹ ಶಾಂತಿ ಅನಿರುದ್ಧ ॥ ೧ ॥

ಐದು ಕಾರಣರೂಪ ಇಪ್ಪತ್ತೈದು ಕಾರ್ಯಗಳೆನಿಸುವವು,
ಆರೈದು ರೂಪದಿ ರಮಿಸುತಿಪ್ಪನು ಈ ಚರಾಚರದಿ,
ಭೇದ ವರ್ಜಿತ ಮೂರ್ಜಗಜ್ಜನ್ಮಾದಿಕಾರಣ, ಮುಕ್ತಿ ದಾಯಕ,
ಸ್ವೋದರದೊಳಿಟ್ಟೆಲ್ಲರನು ಸಂತೈಪ ಸರ್ವಜ್ಞ ॥ ೨ ॥

ಕಾರ್ಯಕಾರಣ ಕರ್ತೃಗಳೊಳು ಸ್ವಭಾರ್ಯರಿಂದೊಡಗೂಡಿ ಕಪಿಲಾಚಾರ್ಯ–
ಕ್ರೀಡಿಸುತಿಪ್ಪ ತನ್ನೊಳು ತಾನೆ ಸ್ವೇಚ್ಛೆಯಲಿ,
ಪ್ರೇರ್ಯನಲ್ಲೆ ರಮಾಬ್ಜ ಭವರಾರ್ಯ ರಕ್ಷಿಸಿ ಶಿಕ್ಷಿಸುವನು,
ಸ್ವವೀರ್ಯದಿಂದಲಿ ದಿವಿಜ ದಾನವ ತತಿಯ ದಿನದಿನದಿ ॥ ೩ ॥

ಈ ಸಮಸ್ತ ಜಗತ್ತಿನೊಳಗಾಕಾಶದೊಳಿರುತಿಪ್ಪ,
ವ್ಯಾಪ್ತಾವೇಶ ಅವತಾರಾಂತರಾತ್ಮಕನಾಗಿ ಪರಮಾತ್ಮ,
ನಾಶರಹಿತ ಜಗತ್ತಿನೊಳಗವಕಾಶದನು ತಾನಾಗಿ–
ಯೋಗೀಶಾಶಯಸ್ಥಿತ ತನ್ನೊಳೆಲ್ಲರನಿಟ್ಟು ಸಲಹುವನು ॥ ೪ ॥

ದಾರುಪಾಷಾಣಗತ ಪಾವಕ ಬೇರೆ ಬೇರಿಪ್ಪಂತೆ,
ಕಾರಣ ಕಾರ್ಯಗಳ ವೊಳಗಿದ್ದು ಕಾರಣಕಾರ್ಯ ನೆಂದೆನಿಸಿ,
ತೋರಿಕೊಳ್ಳದೆ ಎಲ್ಲರೊಳು ವ್ಯಾಪಾರ ಮಾಡುವ,
ಯೋಗ್ಯತೆಗಳನುಸಾರ ಫಲಗಳುಣಿಸಿ ಸಂತೈಸುವ ಕೃಪಾಸಾಂದ್ರ ॥ ೫ ॥

ಊರ್ಮಿಗಳ ವೋಲಿಪ್ಪ ಕರ್ಮ ವಿಕರ್ಮ ಜನ್ಯ ಫಲಾಫಲಂಗಳ,
ನಿರ್ಮಲಾತ್ಮನು ಮಾಡಿ ಮಾಡಿಸಿ ಉಂಡುಣಿಸುತಿಪ್ಪ,
ನಿರ್ಮಮ ನಿರಾಮಯ ನಿರಾಶ್ರಯ ಧರ್ಮವಿತು ಧರ್ಮಾತ್ಮ ಧರ್ಮಗ,
ದುರ್ಮತೀ ಜನರೊಲ್ಲನಪ್ರತಿಮಲ್ಲ ಶ್ರೀನಲ್ಲ ॥ ೬ ॥

ಜಲದ ವಡಬಾನಳಗಳಂಬುಧಿ ಜಲವನುಂಬುವುವು,
ಅಬ್ದ ಮಳೆಗರೆ ದಿಳಿಗೆ ಶಾಂತಿಯನೀವುದು-ಅನಲನು ತಾನೆ ಭುಂಜಿಪುದು,
ತಿಳಿವುದೀಪರಿಯಲ್ಲಿ ಲಕ್ಷ್ಮೀನಿಲಯ ಗುಣಕೃತ ಕರ್ಮಜ-
ಫಲಾಫಲಗಳುಂಡುಣಿಸುವನು ಸರ್ವಗ ಸರ್ವ ಜೀವರಿಗೆ ॥ ೭ ॥

ಪುಸ್ತಕಗಳವಲೋಕಿಸುತ ಮಂತ್ರಸ್ತುತಿಗಳನಲೇನು,
ರವಿಯುದಯಸ್ತಮಯ ಪರಿಯಂತ ಜಪಗಳ ಮಾಡಿ ಫಲವೇನು,
ಹೃಸ್ಥ ಪರಮಾತ್ಮನೆ ಸಮಸ್ತಾವಸ್ಥೆಗಳೊಳಿದ್ದೆಲ್ಲರೊಳಗೆ-
ನಿರಸ್ತ ಕಾಮನು ಮಾಡಿ ಮಾಡಿಪನೆಂದು ತಿಳಿಯದವ ॥ ೮ ॥

ಮದ್ಯಭಾಂಡವ ದೇವನದಿಯೊಳಗದ್ದಿ ತೊಳೆಯಲು ನಿತ್ಯದಲಿ ಪರಿಶುದ್ಧವಾಹುದೆ ಎಂದಿಗಾದರು?
ಹರಿ ಪದಾಬ್ಜಗಳ ಬುದ್ಧಿಪೂರ್ವಕ ಭಜಿಸದವಗೆ-
ವಿರುದ್ಧವೆನಿಸುವವೆಲ್ಲ ಕರ್ಮ ಸಮೃದ್ಧಿಗಳು,
ದು:ಖವನೆ ಕೊಡುತಿಹವಧಮ ಜೀವರಿಗೆ ॥ ೯ ॥

ಭಕ್ತಿಪೂರ್ವಕವಾಗಿ ಮುಕ್ತಾಮುಕ್ತ ನೀಯಾಮಕನ,
ಸರ್ವೋದ್ರಿಕ್ತ ಮಹಿಮೆಗಳನವರತ ಕೊಂಡಾಡು ಮರೆಯದಲೆ,
ಸಕ್ತನಾಗದೆ ಲೋಕವಾರ್ತೆ ಪ್ರಸಕ್ತಿಗಳನೀಡಾಡಿ,
ಶ್ರುತಿ ಸ್ಮೃತ್ಯುಕ್ತ ಕರ್ಮವ ಮಾಡುತಿರು ಹರಿಯಾಜ್ಞೆಯೆಂದರಿದು ॥ ೧೦ ॥

ಲೋಪವಾದರು ಸರಿಯೆ ಕರ್ಮಜ ಪಾಪಪುಣ್ಯಗಳೆರಡು ನಿನ್ನನು ಲೇಪಿಸವು-
ನಿಷ್ಕಾಮಕನು ನೀನಾಗಿ ಮಾಡುತಿರೆ,
ಸೌಪರಣಿ ವರವಹನ ನಿನ್ನ ಮಹಾಪರಾಧಗಳೆಣಿಸದಲೆ-
ಸ್ವರ್ಗಾಪವರ್ಗವ ಕೊಟ್ಟು ಸಲಹುವ ಸತತ ಸುಖಸಾಂದ್ರ ॥ ೧೧ ॥

ಸ್ವರತ ಸುಖಮಯ ಸುಲಭ ವಿಶ್ವಂಭರ ವಿಶೋಕ ಸುರಾಸುರಾರ್ಚಿತ ಚರಣಯುಗ,
ಚಾರ್ವಾಂಗ ಶಾರ್ಙ್ಗ ಶರಣ್ಯ ಜಿತಮನ್ಯು-
ಪರಮ ಸುಂದರತರ ಪರಾತ್ಪರ, ಶರಣಜನ ಸುರಧೇನು, ಶಾಶ್ವತ ಕರುಣಿ,
ಕಂಜದಳಾಕ್ಷ ಕಾಯೆನೆ ಕಂಗೊಳಿಪ ಶೀಘ್ರ ॥ ೧೨ ॥

ನಿರ್ಮಮನು ನೀನಾಗಿ ಕರ್ಮ ವಿಕರ್ಮಗಳನು ನಿರಂತರದಿ-
ಸುಧರ್ಮನಾಮಕಗರ್ಪಿಸುತ ನಿಷ್ಕಲುಷ ನೀನಾಗು,
ಭರ್ಮಗರ್ಭನ ಜನಕ ದಯದಲಿ ದುರ್ಮತಿಗಳನು ಕೊಡದೆ,
ತನ್ನಯಹರ್ಮ್ಯದೊಳಗಿಟ್ಟೆಲ್ಲ ಕಾಲದಿ ಕಾವ ಕೃಪೆಯಿಂದ ॥ ೧೩ ॥

ಕಲ್ಪ ಕಲ್ಪದಿ ಶರಣಜನ ವರಕಲ್ಪ ವೃಕ್ಷನು,
ತನ್ನ ನಿಜಸಂಕಲ್ಪದನುಸಾರದಲಿ ಕೊಡುತಿಪ್ಪನು ಫಲಾಫಲವ,
ಅಲ್ಪ ಸುಖದಾಪೇಕ್ಷೆಯಿಂದಹಿತಲ್ಪನಾರಾಧಿಸದಿರೆಂದಿಗು,
ಶಿಲ್ಪಗನ ಕೈಸಿಕ್ಕ ಶಿಲೆಯಂದದಲಿ ಸಂತೈಪ ॥ ೧೪ ॥

ದೇಶ ಭೇದಾಕಾಶದಂದದಿ ವಾಸುದೇವನು ಸರ್ವಭೂತ ನಿವಾಸಿಯೆನಿಸಿ,
ಚರಾಚರಾತ್ಮಕನೆಂದು ಕರೆಸುವನು,
ದ್ವೇಷ ಸ್ನೇಹೋದಾಸೀನಗಳಿಲ್ಲೀಶರೀರಗಳೊಳಗೆ,
ಅವರೋಪಾಸನಗಳಂದದಲಿ ಫಲವೀವನು ಪರಬ್ರಹ್ಮ ॥ ೧೫ ॥

ಸಂಚಿತಾಗಾಮಿಗಳ ಕರ್ಮ ವಿರಿಂಚಿ ಜನಕನ ಭಜಿಸೆ ಕೆಡುವವು,
ಮಿಂಚಿನಂದದಿ ಪೊಳೆವ ಪುರುಷೋತ್ತಮ ಹೃದಯಂಬರದಿ,
ವಂಚಿಸುವ ಜನರೊಲ್ಲ, ಶ್ರೀವತ್ಸಾಂಚಿತ ಸುಸದ್ವಕ್ಷ,
ತಾ ನಿಷ್ಕಿಂಚನ ಜನ ಪ್ರಿಯ ಸುರಮುನಿಗೇಯ ಶುಭಕಾಯ ॥ ೧೬ ॥

ಕಾಲದ್ರವ್ಯ ಸುಕರ್ಮ ಶುದ್ಧಿಯ ಪೇಳುವರು ಅಲ್ಪರಿಗೆ,
ಅವು ನಿರ್ಮೂಲ ಗೈಸುವವೆಲ್ಲ ಪಾಪಗಳೆಲ್ಲ ಕಾಲದಲಿ,
ತೈಲಧಾರೀಯಂತವನ ಪದಓಲಯಿಸಿ ತುತಿಸದಲೆ ನಿತ್ಯದಿ,
ಬಾಲಿಶರು ಕರ್ಮಗಳೆ ತಾರಕವೆಂದು ಪೇಳುವರು ॥ ೧೭ ॥

ಕಮಲ ಸಂಭವ ಶರ್ವ ಶಕ್ರಾದ್ಯಮರರೆಲ್ಲರು ಇವನ ದುರತಿಕ್ರಮ ಮಹಿಮೆಗಳ–
ಮನವಚನದಿಂ ಪ್ರಾಂತಗಾಣದಲೆ ಶ್ರಮಿತರಾಗಿ–
ಪದಾಬ್ಜಕಲ್ಪದ್ರುಮದ ನೆಳಲಾಶ್ರಯಿಸಿ–
ಲಕ್ಷ್ಮೀರಮಣ ಸಂತೈಸೆಂದು ಪ್ರಾರ್ಥಿಪರತಿ ಭಕುತಿಯಿಂದ ॥ ೧೮ ॥

ವಾರಿಚರವೆನಿಸುವವು ದರ್ದುರ, ತಾರಕಗಳೆಂದರಿದು ಭೇಕವನೇರಿ–
ಜಲಧಿಯ ದಾಟುವೆನು ಯೆಂಬುವನ ತೆರದಂತೆ,
ತಾರತಮ್ಯ ಜ್ಞಾನ ಶೂನ್ಯರು ಸೂರಿಗಮ್ಯನ ತಿಳಿಯಲರಿಯದೆ,
ಸೌರ ಶೈವಮತಾನುಗರ ಅನುಸರಿಸಿ ಕೆಡುತಿಹರು ॥ ೧೯ ॥

ಕ್ಷೋಣಿಪತಿ ಸುತನೆನಿಸಿ ಕೈದುಗ್ಗಾಣಿಗೊಡ್ಡುವ ತೆರದಿ,
ಸುಮನಸ ಧೇನು ಮನೆಯೊಳಗಿರಲು ಗೋಮಯ ಬಯಸುವಂದದಲಿ,
ವೇಣುಗಾನ ಪ್ರಿಯನ ಅಹಿಕ ಸುಖಾನುಭವ ಬೇಡದಲೆ,
ಲಕ್ಷ್ಮೀ ಪ್ರಾಣನಾಥನ ಪಾದ ಭಕುತಿಯ ಬೇಡು ಕೊಂಡಾಡು ॥ ೨೦ ॥

ಕ್ಷುಧೆಯುಗೋಸುಗ ಪೋಗಿ ಕಾನನ ಬದರಿ ಫಲಗಳಪೇಕ್ಷೆಯಿಂದಲಿ–
ಪೊದೆಯೊಳಗೆ ಸಿಗ ಬಿದ್ದು ಬಾಯ್ದೆರದವನ ತೆರದಂತೆ,
ವಿಧಿಪಿತನ ಪೂಜಿಸದೆ ನಿನ್ನಯ ಉದರಗೋಸುಗ–
ಸಾಧುಲಿಂಗಪ್ರದರುಶಕರಾರಾಧಿಸುತ ಬಳಲದಿರು ಭವದೊಳಗೆ ॥ ೨೧ ॥

ಜ್ಞಾನ ಜ್ಞೇಯ ಜ್ಞಾತೃವೆಂಬಭಿಧಾನದಿಂ–
ಬುದ್ಧ್ಯಾದಿಗಳಧಿಷ್ಠಾನದಲಿ ನೆಲೆಸಿದ್ದು ಕರೆಸುತ ತತ್ತದಾಹ್ವಯದಿ,
ಭಾನುಮಂಡಲಗ ಪ್ರದರ್ಶಕ ತಾನೆನಿಸಿ ವಶನಾಗುವನು,
ಶುಕ ಶೌನಕಾದಿ ಮುನೀಂದ್ರ ಹೃದಯಾಕಾಶಗತಚಂದ್ರ ॥ ೨೨ ॥

ಉದಯವ್ಯಾಪಿಸಿ ದರ್ಶ ಪೌರ್ಣಿಮ ಅಧಿಕಯಾಮವು ಶ್ರವಣ ಅಭಿಜಿತು ಸದನವ್ಯೈದಿರೆ–
ಮಾಳ್ಪ ತೆರದಂದದಲಿ ಹರಿಸೇವೆ,
ವಿಧಿನಿಷೇಧಗಳೇನು ನೋಡದೆ ವಿಧಿಸುತಿರು ನಿತ್ಯದಲಿ,
ತನ್ನಯ ಸದನದೊಳಗಿಂಬಿಟ್ಟು ಸಲಹುವ ಭಕ್ತವತ್ಸಲನು ॥ ೨೩ ॥

ನಂದಿವಾಹನರಾತ್ರಿ–ಸಾಧನೆ ಬಂದ ದ್ವಾದಶಿ–ದಶಮಿ–ಪೈತೃಕ ಸಂಧಿಸಿಹ ಸಮಯದಲಿ,
ಶ್ರವಣವ ತ್ಯಜಿಸುವಂತೆ ಸದಾ,
ನಿಂದ್ಯರಿಂದಲಿ ಬಂದ ದ್ರವ್ಯವ ಕಂದೆರದು ನೋಡದಲೆ,
ಶ್ರೀಮದಾನಂದ ತೀರ್ಥಾಂತರ್ಗತನ ಸರ್ವತ್ರ ಭಜಿಸುತಿರು ॥ ೨೪ ॥

ಶ್ರೀಮನೋರಮ ಮೇರು ತ್ರಿಕಕುದ್ಧಾಮ ಸತ್ಕಲ್ಯಾಣಗುಣ ನಿಸ್ಸೀಮ–
ಪಾವನನಾಮ ದಿವಿಜೋದ್ಧಾಮ ರಘುರಾಮ,
ಪ್ರೇಮಪೂರ್ವಕ ನಿತ್ಯ ತನ್ನ ಮಹಾ ಮಹಿಮೆಗಳ ತುತಿಸುವರಿಗೆ,
ಸುಧಾಮಗೊಲಿದಂದದಲಿ ಅಖಿಳಾರ್ಥಗಳ ಕೊಡುತಿಪ್ಪ ॥ ೨೫ ॥

ತಂದೆ ತಾಯ್ಗಳ ಕುರುಹನರಿಯದ ಕಂದ,
ದೇಶಾಂತರದೊಳಗೆ ತನ್ನಂದದಲಿಯಿಪ್ಪವರ ಜನನೀ ಜನಕರನು ಕಂಡು,
ಹಿಂದೆ ಎನ್ನನು ಪಡೆದವರು ಈಯಂದದಲಿ ಯಿಪ್ಪರಲನಾನವರೆಂದು ಕಾಣುವೆನೆನುತ–
ಹುಡುಕುವ ತೆರದಿ ಕೋವಿದರು ॥ ೨೬ ॥

ಶ್ರುತಿಪುರಾಣ ಸಮೂಹದೊಳು, ಭಾರತ ಪ್ರತಿಪ್ರತಿ ಪದಗಳೊಳು,
ನಿರ್ಜಿತನ ಗುಣರೂಪಗಳ ಪುಡುಕುತ ಪರಮಹರುಷದಲಿ,
ಮತಿಮತರು ಪ್ರತಿದಿವಸ ಸಾರಸ್ವತ ಸಮುದ್ರದಿ–
ಶಫರಿಯೆಂದದಿ ಸತತ ಸಂಚರಿಸುವರು ಕಾಣುವ ಲವಲವಿಕೆಯಿಂದ ॥ ೨೭ ॥

ಮತ್ಸ್ಯಕೇತನ ಜನಕ, ಹರಿ ಶ್ರೀವತ್ಸಲಾಂಛನ, ನಿಜಶರಣ ಜನ ವತ್ಸಲ,
ವರಾರೋಹ ವೈಕುಂಠಾಲಯ ನಿವಾಸಿ,
ಚಿತ್ಸುಖಪ್ರದ ಸಲಹೆನಲು ಗೋವತ್ಸಧ್ವನಿಗೊದಗುವ ತೆರದಿ,
ಪರಮೋತ್ಸಹದಿ ಬಂದೊದಗುವನು ನಿರ್ಮತ್ಸರರ ಬಳಿಗೆ ॥ ೨೮ ॥

ಸೂರಿಗಳಿಗೆ ಸಮೀಪಗ, ದುರಾಚಾರಿಗಳಿಗೆಂದೆಂದು ದೂರಾದ್ದೂರತರ-
ದುರ್ಲಭನೆನಿಸುವನು ದೈತ್ಯಸಂತತಿಗೆ,
ಸಾರಿ ಸಾರಿಗೆ ನೆನೆವವರ ಸಂಸಾರ ವೆಂಬ ಮಹೋರಗಕೆ ಸರ್ವಾರಿಯೆನಿಸಿ,
ಸದಾ ಸುಸೌಖ್ಯವನೀವ ಶರಣರಿಗೆ ॥ ೨೯ ॥

ಚಕ್ರ ಶಂಖ ಗದಾಬ್ಜಧರ, ದುರತಿಕ್ರಮ, ದುರಾವಾಸ,
ವಿಧಿ ಶಿವ ಶಕ್ರ ಸೂರ್ಯಾದ್ಯಮರ ಪೂಜ್ಯಪದಾಬ್ಜ, ನಿರ್ಲಜ್ಜ,
ಶುಕ್ರಶಿಷ್ಯರ ಅಶ್ವಮೇಧಾಪ್ರಕ್ರಿಯವ ಕೆಡಿಸ್ಯಬ್ಜಜಾಂಡವತಿಕ್ರಮಿಸಿ-
ಜಾಹ್ನವಿಯಪಡೆದ ತ್ರಿವಿಕ್ರಮಾಹ್ವಯನು ॥ ೩೦ ॥

ಶಕ್ತರೆನಿಸುವರಿಲ್ಲ ಹರಿವ್ಯತಿರಿಕ್ತ ಸುರಗಣದೊಳಗೆ,
ಸರ್ವೋದ್ರಿಕ್ತನೆನಿಸುವ ಸರ್ವರಿಂದಲಿ ಸರ್ವಕಾಲದಲಿ,
ಭಕ್ತಿ ಪೂರ್ವಕವಾಗಿ ಅನ್ಯ ಪ್ರಸಕ್ತಿಗಳ ನೀಡಾಡಿ ಪರಮಾಸಕ್ತನಾಗಿರು,
ಹರಿಕಥಾಮೃತ ಪಾನ ವಿಷಯದಲಿ ॥ ೩೧ ॥

ಪ್ರಣತಕಾಮದ ಭಕ್ತ ಚಿಂತಾಮಣಿ, ಮಣಿಮಯಾಭರಣ ಭೂಷಿತ,
ಗುಣಿ ಗುಣತ್ರಯ ದೂರವರ್ಜಿತ, ಗಹನ ಸನ್ಮಹಿಮ,
ಎಣಿಸ ಭಕ್ತರ ದೋಷಗಳ, ಕುಂಭಿಣಿಜೆಯಾಣ್ಮ, ಶರಣ್ಯ,
ರಾಮಾರ್ಪಣವೆನಲು ಕೈಕೊಂಡ ಶಬರಿಯ ಫಲವ ಪರಮಾತ್ಮ ॥ ೩೨ ॥

ಬಲ್ಲೆನೆಂಬುವರಿಲ್ಲವೀತನ, ಒಲ್ಲೆನೆಂಬುವರಿಲ್ಲ,
ಲೋಕದೊಳಿಲ್ಲದಿಹ ಸ್ಥಳವಿಲ್ಲವೈ, ಜ್ಞಾತ ಜನರಿಲ್ಲ,
ಬೆಲ್ಲದಚ್ಚಿನ ಬೊಂಬೆಯೆಂದದಿ ಎಲ್ಲರೊಳಗಿರುತಿಪ್ಪ,
ಶ್ರೀಭೂನಲ್ಲ, ಇವಗೆಣೆಯಿಲ್ಲ, ಅಪ್ರತಿಮಲ್ಲ, ಜಗಕೆಲ್ಲ ॥ ೩೩ ॥

ಶಬ್ದಗೋಚರ ಶಾರ್ವರೀಕರ ಅಬ್ದವಾಹನನನುಜ,
ಯದುವಂಶಾಬ್ಧಿ ಚಂದ್ರಮ, ನಿರುಪಮ-ಸುನಿಸ್ಸೀಮ-ಸಮಿತಸಮ,
ಲಬ್ಧನಾಗುವ ತನ್ನವಗೆ ಪ್ರಾರಬ್ಧಕರ್ಮಗಳುಣಿಸಿ ತೀವ್ರದಿ,
ಕ್ಷುಬ್ಧಪಾವಕನಂತೆ ಬಿಡದಿಪ್ಪನು ದಯಾಸಾಂದ್ರ ॥ ೩೪ ॥

ಶ್ರೀವಿರಿಂಚಾದ್ಯಮರ ವಂದಿತ ಈ ವಸುಂಧರೆಯೊಳಗೆ,
ದೇವಕಿ ದೇವಿ ಜಠರದೊಳವತರಿಸಿದನು ಅಜನು ನರರಂತೆ,
ರೇವತೀರಮಣಾನುಜನು ಸ್ವಪದಾವಲಂಬಿಗಳನು ಸಲಹಿ–
ದೈತ್ಯಾವಳಿಯ ಸಂಹರಿಸಿದ ಜಗನ್ನಾಥ ವಿಠಲನು ॥ ೩೫ ॥

॥ ಇತಿ ಶ್ರೀ ಕರ್ಮವಿಮೋಚನ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

## ॥ ೨೨. ಶ್ರೀ ಭಕ್ತಾಪರಾಧಸಹಿಷ್ಣು ಸಂಧಿ ॥
## ॥ ೨೨. ಶ್ರೀ ಸಕಲದುರಿತ ನಿವಾರಣ ಸಂಧಿ ॥

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ,
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥

ಶ್ರೀಲಕುಮಿವಲ್ಲಭಗೆ ಸಮ ಕರುಣಾಳುಗಳ ನಾಕಾಣೆನೆಲ್ಲಿ,
ಕುಚೇಲನವಲಿಗೆ ಮೆಚ್ಚಿ ಕೊಟ್ಟನು ಸಕಲ ಸಂಪದವ,
ಕೇಳಿದಾಕ್ಷಣ ವಸ್ತ್ರಗಳ ಪಾಂಚಾಲಿಗಿತ್ತನು,
ದೈತ್ಯನುದರವ ಸೀಳಿ ಸಂತೈಸಿದನು ಪ್ರಹ್ಲಾದನ ಕೃಪಾಸಾಂದ್ರ ॥ ೧ ॥

ದೇವಶರ್ಮಾಹ್ವಯ ಕುಟುಂಬಕೆ ಜೀವನೋಪಾಯವನು ಕಾಣದೆ,
ದೇವದೇವಶರಣ್ಯ ರಕ್ಷಿಸು ರಕ್ಷಿಸೆನೆ ಕೇಳಿ,
ತಾ ವೊಲಿದು ಪಾಲಿಸಿದ ಸೌಖ್ಯ ಕೃಪಾವಲೋಕನದಿಂದ,
ಈತನ ಸೇವಿಸದೆ ಸೌಖ್ಯಗಳ ಬಯಸುವರಲ್ಪ ಮಾನವರು ॥ ೨ ॥

ಶ್ರೀನಿವಾಸನ ಪೋಲ್ವ ಕರುಣಿಗಳೀನಳಿನಜಾಂಡದೊಳು ಕಾಣೆ,
ಪ್ರವೀಣರಾದವರರಸಿ ನೋಳ್ಪುದು ಶ್ರುತಿಪುರಾಣದೊಳು,
ದ್ರೋಣ ಭೀಷ್ಮ ಕೃಪಾದಿಗಳು ಕುರುಸೇನೆಯೊಳಗಿರೆ,
ಅವರವಗುಣಗಳೇನು ನೋಡದೆ ಪಾಲಿಸಿದ ಪರಮಾತ್ಮ ಪರಗತಿಯ ॥ ೩ ॥

ಚಂಡ ವಿಕ್ರಮ ಚಕ್ರ ಶಂಖವ ತೋಂಡಮಾನ ನೃಪಾಲಗಿತ್ತನು,
ಭಾಂಡಕಾರಕ ಭೀಮನ ಮೃದಾಭರಣಗಳಿಗೊಲಿದ,
ಮಂಡೆವಡದಾಕಾಶರಾಯನ ಹೆಂಡತಿಯ ನುಡಿಕೇಳಿ ಮಗಳಿಗೆ ಗಂಡನೆನಿಸಿದ,
ಗಹನ ಮಹಿಮ ಗದಾಬ್ಜಧರಪಾಣಿ ॥ ೪ ॥

ಗೌತಮನ ನಿಜಪತ್ನಿಯನು ಪುರುಹೂತನೈದಿರೆ ಕಾಯ್ದ,
ವೃತ್ರನ ಘಾತಿಸಿದ ಪಾಪವನು ನಾಲ್ಕು ವಿಭಾಗ ಮಾಡಿದನು,
ಶಾತಕುಂಭಾತ್ಮಕ ಕಿರೀಟವ ಕೈತವದಿ ಕದ್ದೊಯ್ದ-
ಇಂದ್ರಾರಾತಿ ಬಾಗಿಲ ಕಾಯ್ದ ಭಕ್ತತ್ವೇನ ಸ್ವೀಕರಿಸಿ ॥ ೫ ॥

ನಾರ ನಂದವ್ರಜದ ಸ್ತ್ರೀಯರ ಜಾರಕರ್ಮಕೆ ಒಲಿದ,
ಅಜ ಸುಕುಮಾರನೆನಿಸಿದ ನಂದಗೋಪಗೆ ನಳಿನಭವ ಜನಕ,
ವೈರವರ್ಜಿತ ದೈತ್ಯರನ ಸಂಹಾರ ಮಾಡಿದ,
ವಿಪಗಮನ ಪೆಗಲೇರಿದನು ಗೋಪಾಲಕರ ವೃಂದಾವನದೊಳಂದು ॥ ೬ ॥

ಶ್ರೀಕರಾರ್ಚಿತ ಪಾದಪಲ್ಲವ ಗೋಕುಲದ ಗೊಲ್ಲತಿಯರೊಲಿಸಿದ,
ಪಾಕಶಾಸನ ಪೂಜ್ಯ ಗೋ ಗೋವತ್ಸಗಳ ಕಾಯ್ದು,
ನೀಕರಿಸಿ ಕುರುಪತಿಯ ಭೋಜನ ಸ್ವೀಕರಿಸಿದನು ವಿದುರನೌತಣ,
ಬಾಕುಲಿಕನಂದದಲಿ ತೋರಿದ ಭಕ್ತ ವತ್ಸಲನು ॥ ೭ ॥

ಪುತ್ರನೆನಿಸಿದ ಗೋಪಿದೇವಿಗೆ, ಭರ್ತೃವೆನಿಸಿದ ವ್ರಜದನಾರಿಯ ರುತ್ರಲಾಲಿಸಿ,
ಪರ್ವತವ ನೆಗದಿಹ ಕೃಪಾಸಾಂದ್ರ,
ಶತ್ರು ತಾಪನ ಯಜ್ಞ ಪುರುಷನ ಪುತ್ರಿಯರ ತಂದಾಳ್ದ,
ತ್ರಿಜಗದ್ಧಾತ್ರ ಮಂಗಳಗಾತ್ರ ಪರಮ ಪವಿತ್ರ ಸುರಮಿತ್ರ ॥ ೮ ॥

ರೂಪನಾಮವಿಹೀನ ಗರ್ಗಾರೋಪಿತ ಸುನಾಮದಲಿ ಕರೆಸಿದ,
ವ್ಯಾಪಕ ಪರಿಚ್ಛಿನ್ನ ರುಪದಿ ತೋರ್ದ ಲೋಗರಿಗೆ,
ದ್ವಾಪರಾಂತ್ಯದಿ ದೈತ್ಯರನು ಸಂತಾಪಗೊಳಿಸುವೆನೆಂದು-
ಶ್ವೇತದ್ವೀಪ ಮಂದಿರನವತರಿಸಿ ಸಲಹಿದನು ತನ್ನವರ ॥ ೯ ॥

ಶ್ರೀವಿರಿಂಚಾದ್ಯಮರನುತ ನಾನಾವತಾರವ ಮಾಡಿ ಸಲಹಿದ-
ದೇವತೆಗಳನು ಋಷಿಗಳನು ಕ್ಷಿತಿಪರನು,
ಮಾನವರ ಸೇವಗಳ ಕೈಕೊಂಡು ಫಲಗಳ ನೀವ,
ನಿತ್ಯಾನಂದಮಯ ಸುಗ್ರೀವ ಧೃವ ಮೊದಲಾದ ಭಕ್ತರಿಗಿತ್ತ ಪುರುಷಾರ್ಥ ॥ ೧೦ ॥

ದುಷ್ಟದಾನವಹರಣ ಸರ್ವೋತ್ಕೃಷ್ಟ ಸದ್ಗುಣ ಭರಿತ,
ಭಕ್ತಾಭೀಷ್ಟದಾಯಕ ಭಯವಿನಾಶನ ವಿಗತ ಭಯಶೋಕ,
ನಷ್ಟತುಷ್ಟಿಗಳಿಲ್ಲ ಸೃಷ್ಟ್ಯಾದ್ಯಷ್ಟಕರ್ತನಿಗಾವ ಕಾಲದಿ,
ಹೃಷ್ಟನಾಗುವ ಸ್ಮರಣೆ ಮಾತ್ರದಿ ಹೃದ್ಗುಹನಿವಾಸಿ ॥ ೧೧ ॥

ಹಿಂದೆ ಪ್ರಳಯೋದಕದಿ ತಾವರೆ ಕಂದ ನಂಜಿಸಿ ಕಾಯ್ದು,
ತಲೆಯಲಿ ಬಾಂದೊರೆಯು ಪೊತ್ತವಗೊಲಿದು ಪರಿಯಂಕ ಪದವಿತ್ತ,
ವಂದಿಸಿದ ವೃಂದಾರಕರ ಸದ್ವೃಂದಕುಣಿಸಿದ ಸುಧೆಯ,
ಕರುಣಾಸಿಂಧು ಕಮಲಾಕಾಂತ ಬಹು ನಿಶ್ಚಿಂತ ಜಯವಂತ ॥ ೧೨ ॥

ಸತ್ಯಸಂಕಲ್ಪಾನುಸಾರ ಪ್ರವರ್ತಿಸುವ ಪ್ರಭು,
ತನಗೆ ತಾನೆ ಭೃತ್ಯನೆನಿಸುವ ಭೋಕ್ತೃ ಭೋಗ್ಯ ಪದಾರ್ಥದೊಳಗಿದ್ದು,
ತತ್ತದಾಹ್ವಯನಾಗಿ ತರ್ಪಕ ತೃಪ್ತಿ ಬಡಿಸುವ ತತ್ವಪತಿಗಳ,
ಮತ್ತರಾದ ಅಸುರರ್ಗೆ ಅಸಮೀಚೀನ ಫಲವೀವ ॥ ೧೩ ॥

ಬಿಟ್ಟಿಗಳ ನೆವದಿಂದಡಾಗಲಿ, ಪೊಟ್ಟೆಗೋಸುಗವಾದಡಾಗಲಿ,
ಕೆಟ್ಟರೋಗ ಪ್ರಯುಕ್ತ ವಾಗಲಿ ಅಣಕದಿಂದೊಮ್ಮೆ-
ನಿಟ್ಟುಸಿರಿನಿಂ ಬಾಯ್ದೆರದು ಹರಿ ವಿಠಲಾ ಸಲಹೆಂದೆನಲು,
ಕೈಗೊಟ್ಟು ಕಾವ ಕೃಪಾಳು ಸಂತತ ತನ್ನ ಭಕುತರನು ॥ ೧೪ ॥

ಈ ವಸುಂಧರೆಯೊಳಗೆ ಶ್ರೀಭೂ ದೇವಿಯರಸನ ಸುಗುಣ ಕರ್ಮಗಳು,
ಆವ ಬಗೆಯಿಂದಾದಡಾಗಲಿ ಕೀರ್ತಿಸಿದ ನರರ ಕಾವ,
ಕಮಲದಳಾಯತಾಕ್ಷ ಕೃಪಾವ ಲೋಕನದಿಂದ-
ಕಪಿ ಸುಗ್ರೀವಗೊಲಿದಂದದಲಿ ವೊಲಿದಭಿಲಾಷೆ ಪೂರೈಪ ॥ ೧೫ ॥

ಚೇತನಾಂತರ್ಯಾಮಿ ಲಕ್ಷ್ಮೀನಾಥ ಕರ್ಮಗಳನುಸರಿಸಿ-
ಜನಿತೋಥ ವಿಷ್ಣೋಯೆಂಬ ಶ್ರುತಿ ಪ್ರತಿಪಾದ್ಯ-
ಯೆಮ್ಮೊಡನೆ ಜಾತನಾಗುವ ಜನ್ಮರಹಿತಾಕೂತಿನಂದನ,
ಭಕ್ತರಿಂದಾಹೂತನಾಗಿ ಮನೋರಥವ ಬೇಡಿಸಿಕೊಳದೆ ಈವ ॥ ೧೬ ॥

ನೃಷತುಯೆನಿಸುವ ಮನುಜರೊಳು, ಸುರಋಷಭ ಇಂದ್ರಿಯಗಳೊಳು,
ತತ್ತದ್ವಿಷಯಗಳ ಭುಂಜಿಸುವ ಹೋತಾಹ್ವಯನು ತಾನಾಗಿ,
ಮೃಷರಹಿತ ವೇದದೊಳು, ಋತುಸತು ಪೆಸರಿನಿಂದಲಿ ಕರೆಸುವ-
ಜಗತ್ಪ್ರಸವಿತ ನಿರಂತರದಿ ಸಂತೈಸುವನು ಭಕುತರನು ॥ ೧೭ ॥

ಅಬ್ಜಭವಪಿತ ಜಲಧರಾದ್ರಿಯೊಳಬ್ಜ ಗೋಜಾದ್ರಿಜನೆನಿಸಿ,
ಜಲದುಬ್ಬಳೀ ಪೀಯೂಷದಾವರೆ ಶ್ರೀಶಶಾಂಕದೊಳು,
ಕಬ್ಬುಕದಳಿ ಲತಾತೃಣದ್ರುಮ ಹೆಬ್ಬಗೆಯ ಮಾಡುತಿಹ ಗೋಜನು,
ಇಬ್ಬಗೆ ಪ್ರತೀಕ ಮಣಿಮೃಗ ಸೃಜಿಪ ಅದ್ರಿಜನು ॥ ೧೮ ॥

ಶ್ರುತಿವಿನುತ ಸರ್ವತ್ರದಲಿ ಭಾರತಿ ರಮಣನೊಳಗಿದ್ದು-
ತಾ ಶುಚಿಷತುಯೆನಿಸಿ ಜಡಚೇತನರನ ಪವಿತ್ರ ಮಾಡುತಿಹ,
ಅತುಳ ಮಹಿಮಾನಂತ ರೂಪಾಚ್ಯುತನೆನಿಸಿ ಚಿದ್ದೇಹದೊಳು-
ಪ್ರಾಕೃತ ಪುರುಷನಂದದಲಿ ನಾನಾ ಚೇಷ್ಟೆಗಳ ಮಾಳ್ಪ ॥ ೧೯ ॥

ಅತಿಥಿಯೆನಿಸುವ ಅನ್ನಮಯ ಭಾರತಿ ರಮಣನೊಳು,
ಪ್ರಾಣಮಯ ಪ್ರಾಕೃತ ವಿಷಯ ಚಿಂತನೆಯ ಮಾಡಿಸುವನು,
ಮನೋಮಯನು ಯತನ, ವಿಜ್ಞಾನಮಯ ಬರಲದ ಜತನ ಮಾಡಿಸಿ,
ಆತ್ಮಜಾಯಾ ಸುತರ ಸಂಗದಿ ಸುಖವನೀವಾನಂದಮಯನೆನಿಸಿ ॥ ೨೦ ॥

ಇನಿತು ರೂಪಾತ್ಮನಿಗೆ ದೋಷಗಳೆನಿತು ಬಪ್ಪವು ಪೇಳಿರೈ-
ಬ್ರಾಹ್ಮಣ ಕುಲೋತ್ತಮರಾದವರು ನಿಷ್ಕಪಟ ಬುದ್ಧಿಯಲಿ,
ಗುಣನಿಯಾಮಕ ತತ್ತದಾಹ್ವಯನೆನಿಸಿ ಕಾರ್ಯವ ಮಾಳ್ಪದೇವನ ನೆನೆದ ಮಾತ್ರದಿ,
ದೋಷರಾಶಿಗಳೆಲ್ಲ ಕೆಡುತಿಹವು ॥ ೨೧ ॥

ಕುಸ್ಥನೆನಿಸುವ ಭೂಮಿಯೊಳು, ಆಶಸ್ಥನೆನಿಸುವ ದಿಗ್ವಲಯದೊಳು,
ಖಸ್ಥನೆನಿಪಾಕಾಶದೊಳು, ಒಬ್ಬೊಬ್ಬರೊಳಗಿದ್ದು ವ್ಯಸ್ತನೆನಿಸುವ,
ಸರ್ವರೊಳಗೆ ಸಮಸ್ತನೆನಿಸುವ, ಬಳಿಯಲಿದ್ದು ಉಪಸ್ಥನೆನಿಪ,
ವಿಶೋಧನ ವಿಶುದ್ಧಾತ್ಮ ಲೋಕದೊಳು ॥ ೨೨ ॥

ಜ್ಞಾನದನು ಯೆಂದೆನಿಪ ಶಾಸ್ತ್ರದಿ, ಮಾನದನು ಯೆಂದೆನಿಪ ವಸನದಿ,
ದಾನಶೀಲ ಸುಬುದ್ಧಿಯೊಳಗೆ ಅವದಾನ್ಯನೆನಿಸುವನು,
ವೈನತೇಯವರೂಥ ತತ್ತತ್ಸ್ಥಾನದಲಿ ತತ್ತತ್ಸ್ವಭಾವಗಳಾನುಸಾರ-
ಚರಿತ್ರೆ ಮಾಡುತ ನಿತ್ಯನೆಲೆಸಿಪ್ಪ ॥ ೨೩ ॥

ಗ್ರಾಮಪನೊಳಗ್ರಣಿಯೆನಿಸುವನು, ಗ್ರಾಮಿಣೀಯೆನಿಸುವನು ಜನರೊಳು,
ಗ್ರಾಮುಪಗ್ರಾಮಗಳೊಳಗೆ ಶ್ರೀಮಾನ್ಯನೆನಿಸುತಿಪ್ಪ,
ಶ್ರೀಮನೋರಮ ತಾನೆ ಯೋಗಕ್ಷೇಮನಾಮಕನಾಗಿ ಸಲಹುವ,
ಈ ಮಹಿಮೆ ಮಿಕ್ಕಾದ ದೇವರಿಗುಂಟೆ ಲೋಕದೊಳು ॥ ೨೪ ॥

ವಿಜಯಸಾರಥಿಯೆಂದು ಗರುಡಧ್ವಜನ ಮೂರ್ತಿಯ-
ಭಕ್ತಿಪೂರ್ವಕ ಭಜಿಸುತಿಪ್ಪ ಮಹಾತ್ಮರಿಗೆ ಸರ್ವತ್ರದಲಿ ವೊಲಿದು-
ವಿಜಯದನು ತಾನಾಗಿ ಸಲಹುವ, ಭುಜಗಭೂಷಣ ಪೂಜ್ಯ ಚರಣಾಂಬುಜ,
ವಿಭೂತಿದ, ಭುವನಮೋಹನರೂಪ ನಿರ್ಲೇಪ ॥ ೨೫ ॥

ಅನಭಿಮತ ಕರ್ಮಪ್ರವಹದೊಳಗನಿಮಿಷಾದಿ ಸಮಸ್ತ ಚೇತನಗಣವಿಹುದು–
ತತ್ಫಲಗಳುಣ್ಣದೆ ಸೃಷ್ಟಿಸಿದ ಮುನ್ನ,
ವನಿತೆಯಿಂದೊಡಗೂಡಿ ಕರುಣಾವನಧಿ ನಿರ್ಮಿಸೆ,
ತಮ್ಮ ತಮ್ಮಯ ಅನುಚಿತೋಚಿತ ಕರ್ಮ ಫಲಗಳ ಉಣುತ ಚರಿಸುವರು ॥ ೨೬ ॥

ಝಲ್ಲಡಿಯ ನೆಳಲಂತೆ ತೋರ್ಪುದು ಎಲ್ಲ ಕಾಲದಿ ಭವದ ಸೌಖ್ಯವು,
ಎಲ್ಲಿ ಪೊಕ್ಕರು ಬಿಡದೆ ಬೆಂಬತ್ತಿಹುದು ಜೀವರಿಗೆ,
ಒಲ್ಲೆನೆಂದರೆ ಬಿಡದು, ಹರಿ ನಿರ್ಮಾಲ್ಯ ನೈವೇದ್ಯವನು ಭುಂಜಿಸಿ,
ಬಲ್ಲವರ ಕೂಡಾಡು ಭವದುಃಖಗಳ ನೀಡಾಡು ॥ ೨೭ ॥

ಕುಟ್ಟಿ, ಕೊಯಿದದನಟ್ಟು, ಇಟ್ಟು, ಅದಸುಟ್ಟು, ಕೊಟ್ಟದ ಮುಟ್ಟಲು,
ಅಘ ಹಿಟ್ಟಿಟ್ಟು ಮಾಳ್ಪದು ವಿಠಲುಂಡುಚ್ಛಿಷ್ಟ,
ಸಜ್ಜನರ ಬಿಟ್ಟು ತನ್ನಯ ಹೊಟ್ಟೆಗೋಸುಗ ಥಟ್ಟನುಣುತಿಹ ಕೆಟ್ಟ ಮನುಜರ ಕಟ್ಟಿ,
ವೈದೆಮಪಟ್ಟಣದೊಳೊತ್ತಟ್ಟಲಿಡುತಿಹನು ॥ ೨೮ ॥

ಜಾಗುಮಾಡದೆ ಭೋಗದಾಸೆಯ ನೀಗಿ, ಪರಮನುರಾಗದಿಂದಲಿ ಭೋಗಿಶಯನನ–
ಆಗರದ ಹೆಬ್ಬಾಗಿಲಲಿ ನಿಂದು ಕೂಗುತಲಿ ಶಿರಬಾಗಿ–
ಕರುಣಾಸಾಗರನೆ ಭವರೋಗ ಭೇಷಜ ಕೈಗೊಡೆಂದೆನೆ,
ಬೇಗನೊದಗುವ ಭಾಗವತರರಸ ॥ ೨೯ ॥

ಏನು ಕರುಣವೋ ತನ್ನವರಲಿ ದಯಾನಿಧಿಗೆ,
ಸದ್ಭಕ್ತಜನರತಿ ಹೀನ ಕರ್ಮವ ಮಾಡಿದರು ಸರಿ ಸ್ವೀಕರಿಸಿ ಪೊರೆವ,
ಪ್ರಾಣಹಿಂಸ ಲುಬ್ಧಕಗೆ ಸುಜ್ಞಾನ ಭಕ್ತಿಗಳಿತ್ತು ದಶರಥಸೂನು,
ವಾಲ್ಮೀಕಿ ಋಷಿಯ ಮಾಡಿದ ಪರಮ ಕರುಣಾಳು ॥ ೩೦ ॥

ಮೂಢಮಾನವ ಎಲ್ಲಕಾಲದಿ ಬೇಡಿಕೊಂಬಿನಿತೆಂದು ದೈನ್ಯದಿ,
ಬೇಡದಂದದಿ ಮಾಡು ಪುರುಷಾರ್ಥಗಳ ಸ್ವಪ್ನದಲಿ,
ನೀಡುವರೆ ನಿನ್ನಮಲಗುಣ ಕೊಂಡಾಡಿ ಹಿಗ್ಗುವ ಭಾಗವತರೊಡನಾಡಿಸೆನ್ನನು,
ಜನ್ಮಜನ್ಮಗಳಲ್ಲಿ ದಯದಿಂದ ॥ ೩೧ ॥

ಚತುರವಿಧ ಪುರುಷಾರ್ಥರೂಪನು ಚತುರ ಮೂರ್ತ್ಯಾತ್ಮಕ ನಿರಲು,
ಮತ್ತಿತರ ಪುರುಷಾರ್ಥಗಳ ಬಯಸುವರೇನು ಬಲ್ಲವರು,
ಮತಿ ವಿಹೀನರು ಅಲ್ಪ ಸುಖ ಶಾಶ್ವತವೆಂದರಿದನುದಿನದಿ,
ಗಣಪತಿಯೇ ಮೊದಲಾದನ್ಯ ದೇವತೆಗಳನೆ ಭಜಿಸುವರು ॥ ೩೨ ॥

ಒಮ್ಮಿಗಾದರು ಜೀವರೊಳು ವೈಷಮ್ಯ ದ್ವೇಷಾಸೂಯವಿಲ್ಲ,
ಸುಧರ್ಮನಾಮಕ ಸಂತಯಿಸುವನು ಸರ್ವರನು ನಿತ್ಯ,
ಬ್ರಹ್ಮ ಕಲ್ಪಾಂತದಲಿ ವೇದಾಗಮ್ಯ ಶ್ರೀ ಜಗನ್ನಾಥ ವಿಠಲ-
ಸುಮ್ಮನೀವನು ತ್ರಿವಿಧರಿಗೆ ಅವರವರ ನಿಜಗತಿಯ ॥ ೩೩ ॥

॥ ಇತಿ ಶ್ರೀ ಭಕ್ತಾಪರಾಧಸಹಿಷ್ಣು ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

## ॥ ೨೩. ಶ್ರೀ ಬೃಹತ್ತಾರತಮ್ಯ ಸಂಧಿ ॥
## ॥ ೨೩. ಆವೇಶ-ಅವತಾರ ತಾರತಮ್ಯ ಸಂಧಿ ॥

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ,
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥

ಹರಿ ಸಿರಿ ವಿರಂಚೀರ ಮುಖ ನಿರ್ಜರರ ಆವೇಶಾವತಾರಗಳ-
ಸ್ಮರಿಸು ಗುಣಗಳ ಸರ್ವಕಾಲದಿ ಭಕ್ತಿಪೂರ್ವಕದಿ ॥

ಮೀನ ಕೂರ್ಮ ಕ್ರೋಡ ನರಹರಿ ಮಾಣವಕ ಭೃಗುರಾಮ ದಶರಥ ಸೂನು-
ಯಾದವ ಬುದ್ಧ ಕಲ್ಕೀ ಕಪಿಲ ವೈಕುಂಠ-
ಶ್ರೀನಿವಾಸ ವ್ಯಾಸ ಋಷಭ ಹಯಾನನಾ ನಾರಾಯಣೀ ಹಂಸಾನಿರುದ್ಧ-
ತ್ರಿವಿಕ್ರಮ: ಶ್ರೀಧರ ಹೃಷೀಕೇಶ ॥ ೧ ॥
ಹರಿಯು ನಾರಾಯಣನು ಕೃಷ್ಣ ಅಸುರಕುಲಾಂತಕ, ಸೂರ್ಯ ಸಮಪ್ರಭ,
ಕರೆಸುವನು ನಿರ್ದುಷ್ಟ ಸುಖ ಪರಿಪೂರ್ಣ ತಾನೆಂದು,
ಸರುವ ದೇವೋತ್ತಮನು ಸರ್ವಗ ಪರಮ ಪುರುಷ ಪುರಾತನ,
ಜರಾಮರಣ ವರ್ಜಿತ ವಾಸುದೇವಾದ್ಯಮಿತ ರೂಪಾತ್ಮ ॥ ೨ ॥

ಈ ನಳಿನ ಭವ ಜನನಿ ಲಕ್ಷ್ಮೀ,
ಜ್ಞಾನ ಬಲ ಭಕ್ತ್ಯಾದಿ ಗುಣ ಸಂಪೂರ್ಣಳೆನಿಪಳು ಸರ್ವಕಾಲದಿ ಹರಿಕೃಪಾಬಲದಿ,
ಹೀನಳೆನಿಪಳನಂತಗುಣದಿ ಪುರಾಣ ಪುರುಷಗೆ,
ಪ್ರಕೃತಿಗಿನ್ನು ಸಮಾನರೆನಿಸುವರಿಲ್ಲ ಮುಕ್ತಾಮುಕ್ತ ಸುರರೊಳಗೆ ॥ ೩ ॥

ಗುಣಗಳತ್ರಯಮಾನಿ ಶ್ರೀಕುಂಭಿಣಿ ಮಹಾ ದುರ್ಗಾಂಭ್ರಣೀ-
ರುಗ್ಮಿಣಿಯು ಸತ್ಯಾ ಶಾಂತಿ ಕೃತಿ ಜಯ ಮಾಯ ಮಹಲಕುಮಿ-
ಜನಕಜಾಕಮಲಾಲಯಾ ದಕ್ಷಿಣೆಸುಪದ್ಮಾತ್ರಿಲೋಕೇಶ್ವರಿ,
ಅಣು ಮಹತ್ತಿನೊಳಿದ್ದು ಉಪಮಾರಹಿತಳೆನಿಸುವಳು ॥ ೪ ॥

ಘೋಟಕಾಸ್ಯನ ಮಡದಿಗಿಂತಲಿ ಹಾಟಕೋದರ ಪವನರೀರ್ವರು-
ಕೋಟಿ ಗುಣದಿಂದಧಮರೆನಿಪರು ಆವಕಾಲದಲಿ,
ಖೇಟಪತಿ ಶೇಷಾಮರೇಂದ್ರರ ಪಾಟಿಮಾಡದೆ,
ಶ್ರೀಶನ ಕೃಪಾ ನೋಟದಿಂದಲಿ ಸರ್ವರೊಳು ವ್ಯಾಪಾರ ಮಾಡುವರು ॥ ೫ ॥

ಪುರುಷ ಬ್ರಹ್ಮ ವಿರಿಂಚಿ, ಮಾಹಾನ್ಮರುತ ಮುಖ್ಯ ಪ್ರಾಣ-
ಧೃತಿ ಸ್ಮೃತಿ ಗುರುವರ ಮಹಾಧ್ಯಾತ ಬಲ ವಿಜ್ಞಾತ ವಿಖ್ಯಾತ-
ಗರಳಭುಗ್ಭವರೋಗ ಭೇಷಜ ಸ್ವರವರಣ ವೇದಸ್ಥ ಜೀವೇಶ್ವರ-
ವಿಭೀಷಣ ವಿಶ್ವಚೇಷ್ಟಕ ವೀತಭಯ ಭೀಮ ॥ ೬ ॥

ಅನಿಲಸ್ಥಿತಿ ವೈರಾಗ್ಯನಿಧಿ ರೋಚನ ವಿಮುಕ್ತಿಗನಂದ ದಶಮತಿ-
ಅನಿಮಿಷೇಶಾನಿದ್ರ ಶುಚಿ ಸತ್ವಾತ್ಮಕ ಶರೀರ,
ಅಣುಮಹದ್ರೂಪಾತ್ಮಕಾಮೃತ ಹನುಮದಾದ್ಯವತಾರ-
ಪದ್ಮಾಸನ ಪದವಿ ಸಂಪ್ರಾಪ್ತ ಪರಿಸರ ಆಖಣಾಶ್ಮಸಮ ॥ ೭ ॥

ಮಾತರಿಶ್ವ ಬ್ರಹ್ಮರು ಜಗನ್ಮಾತೆಗಧಮಾಧೀನರೆನಿಪರು,
ಶ್ರೀತರುಣಿವಲ್ಲಭನು ಈರ್ವರೊಳಾವ ಕಾಲದಲಿ-
ನೀತ ಭಕ್ತಿ ಜ್ಞಾನ ಬಲರೂಪಾತಿಶಯದಿಂದಿದ್ದು,
ಚೇತನಾಚೇತನಗಳೊಳು ವ್ಯಾಪ್ತರೆನಿಪರು ತತ್ತದಾಹ್ವಯದಿ ॥ ೮ ॥

ಸರಸ್ವತೀ ವೇದಾತ್ಮಿಕಾ ಭುಜಿ ನರಹರೀ ಗುರುಭಕ್ತಿ ಬ್ರಾಹ್ಮೀ-
ಪರಮಸುಖ ಬಲ ಪೂರ್ಣೆ ಶ್ರದ್ಧಾ ಪ್ರೀತಿ ಗಾಯತ್ರೀ,
ಗರುಡ ಶೇಷರ ಜನನಿ, ಶ್ರೀಸಂಕರುಷಣ ಜಯ ತನುಜೆ,
ವಾಣೀ ಕರಣ ನಿಯಾಮಕೆ ಚತುರ್ದಶ ಭುವನ ಸನ್ಮಾನ್ಯೇ ॥ ೯ ॥

ಕಾಳಿ ಕಾಶಿಜೆ ವಿಪ್ರಜೆ ಪಾಂಚಾಲಿ ಶಿವಕನ್ಯೇಂದ್ರ ಸೇನಾ- ।
ಕಾಲಮಾನೀ ಚಂದ್ರ ದ್ಯುಸಭಾನಾಮ ಭಾರತಿಗೆ,
ಫಾಳಿ ಬ್ರಹ್ಮರ ಯುವತಿಯರು ಏಳೇಳು ಐವತ್ತೊಂದು ಗುಣದಿಂ ಕೀಳರೆನಿಪರು,
ತಮ್ಮ ಪತಿಗಳಿಂದಲಾವಾಗ ॥ ೧೦ ॥

ಹರಿ ಸಮೀರಾವೇಶ ನರ, ಸಂಕರುಷಣಾವೇಶಯುತ ಲಕ್ಷ್ಮಣ,
ಪರಮ ಪುರುಷನ ಶುಕ್ಲ ಕೇಶಾವೇಶ ಬಲರಾಮ,
ಹರ ಸದಾಶಿವ–ತಪ–ಅಹಂಕೃತು–ಮರುತಯುಕ್ತ ಶುಕ–ಊರ್ಧ್ವ–ಅಪಟ–
ತತ್ಪುರುಷ–ಜೈಗೀಷೌರ್ವ–ದ್ರೌಣೀ–ವ್ಯಾಧ–ದೂರ್ವಾಸ ॥ ೧೧ ॥

ಗರುಡಶೇಷ ಶಶಾಂಕದಳ ಶೇಖರರು ತಮ್ಮೊಳು ಸಮರು,
ಭಾರತಿ ಸರಸಿಜಾಸನ ಪತ್ನಿಗಧಮರು ನೂರು ಗುಣದಿಂದ,
ಹರಿ ಮಡದಿ ಜಾಂಬವತಿಯೊಳು ಶ್ರೀತರುಣಿಯಾವೇಶ ವಿಹುದೆಂದಿಗು,
ಕೊರತೆಯೆನಿಪರು ಗರುಡಶೇಷರಿಗೈವರೈದುಗುಣ ॥ ೧೨ ॥

ನೀಲಭದ್ರಾ ಮಿತ್ರವಿಂದಾ ಮೇಲೆನಿಪ ಕಾಳಿಂದಿ ಲಕ್ಷಣ–
ಬಾಲೆಯರಿಗಿಂದಧಮ ವಾರುಣಿ ಸೌಪರಣಿ ಗಿರಿಜಾ,
ಶ್ರೀಲಕುಮಿಯುತ ರೇವತೀ ಶ್ರೀಮೂಲರೂಪದಿ ಪೇಯಳೆನಿಪಳು,
ಶೈಲಜಾದ್ಯರು ದಶಗುಣಾಧಮ ತಮ್ಮ ಪತಿಗಳಿಗೆ ॥ ೧೩ ॥

ನರಹರೀರಾವೇಶ ಸಂಯುತ ನರ ಪುರಂದರ ಗಾಧಿ–
ಕುಶ ಮಂದರದ್ಯುಮ್ನ ವಿಕುಕ್ಷಿ ವಾಲೀ ಇಂದ್ರನವತಾರ,
ಭರತ ಬ್ರಹ್ಮಾವಿಷ್ಟ ಸಾಂಬ ಸುದರುಶನ ಪ್ರದ್ಯುಮ್ನ
ಸನಕಾದ್ಯರೊಳಗಿಪ್ಪ ಸನತ್ಕುಮಾರನು ಷಣ್ಮುಖನು ಕಾಮ ॥ ೧೪ ॥

ಈರಯಿದು ಗುಣ ಕಡಿಮೆ ಪಾರ್ವತಿ ವಾರುಣೀಯರಿಗಿಂದ್ರ ಕಾಮ,
ಶರೀರಮಾನಿ ಪ್ರಾಣ ದಶ ಗುಣ ಅವರ ಶಕ್ರನಿಗೆ,
ಮಾರಜಾರತಿ ದಕ್ಷ ಗುರು ವೃತ್ರಾರಿಜಾಯಾ ಶಚಿ ಸ್ವಯಂಭುವರಾರು ಜನ ಸಮ,
ಪ್ರಾಣಗವರರು ಹತ್ತು ಗುಣದಿಂದ ॥ ೧೫ ॥

ಕಾಮಪುತ್ರನಿರುದ್ಧ ಸೀತಾರಾಮನಾನುಜ ಶತ್ರುಹನ,
ಬಲರಾಮನಾನುಜ ಪೌತ್ರನನಿರುದ್ಧನೊಳಗನಿರುದ್ಧ,
ಕಾಮ ಭಾರ್ಯಾರುಗ್ಮವತಿ ಸನ್ನಾಮ ಲಕ್ಷಣಳೆನಿಸುವಳು,
ಪೌಲೋಮಿ ಚಿತ್ರಾಂಗದೆಯು ತಾರಾ ಎರಡು ಪೆಸರುಗಳು ॥ ೧೬ ॥

ತಾರನಾಮಕ ತ್ರೈತೆಯೊಳು ಸೀತಾರಮಣನಾರಾಧಿಸಿದನು,
ಸಮೀರಯುಕ್ತೋದ್ಧವನು ಕೃಷ್ಣಗೆ ಪ್ರೀಯ ನೆನಿಸಿದನು,
ವಾರಿಜಾಸನ ಯುಕ್ತ ದ್ರೋಣನು,
ಮೂರು ಇಳೆಯೊಳು ಬೃಹಸ್ಪತಿಗವತಾರವೆಂಬರು ಮಹಾ ಭಾರತತಾತ್ಪರ್ಯದೊಳಗೆ ॥ ೧೭ ॥

ಮನು ಮುಖಾದ್ಯರಿಗಿಂತ ಪ್ರವಹಾ ಗುಣದಿ ಪಂಚಕ ನೀಚನೆನಿಸುವ,
ಇನ ಶಶಾಂಕರು ಧರ್ಮಮಾನವಿ ಎರಡು ಗುಣದಿಂದ ಕನಿಯರೆನಿಪರು ಪ್ರವಹಗಿಂತಲಿ,
ದಿನಪ ಶಶಿ ಯಮಧರ್ಮ ರೂಪಗಳು,
ಅನುದಿನದಿ ಚಿಂತಿಪುದು ಸಂತರು ಸರ್ವ ಕಾಲದಲಿ ॥ ೧೮ ॥

ಮರುತನಾವೇಶಯುತ ಧರ್ಮಜ ಕರಡಿ ವಿದುರನು ಸತ್ಯಜಿತು-
ಈರೆರಡು ಧರ್ಮನ ರೂಪ,
ಬ್ರಹ್ಮಾವಿಷ್ಟ ಸುಗ್ರೀವ-ಹರಿಯ ರೂಪಾವಿಷ್ಟ ಕರ್ಣನು-ತರಣಿಗೆರಡವತಾರ,
ಚಂದ್ರಮ ಸುರಪನಾವೇಶಯುತನಂಗದನೆನಿಸಿಕೊಳುತಿಪ್ಪ ॥ ೧೯ ॥

ತರಣಿಗಿಂತಲಿ ಪಾದ ಪಾದರೆ ವರುಣ ನೀಚನು-
ಮಹಭಿಷಕು ದರ್ದುರ ಸುಶೇಷಣನು ಶಂತನೂ ನಾಲ್ವರು ವರುಣ ರೂಪ,
ಸುರಮುನೀ ನಾರದನು ಕಿಂಚಿತ್ಕೊರತೆ ವರುಣಗೆ,
ಅಗ್ನಿ ಭೃಗು ಅಜಗೊರಳ ಪತ್ನಿ ಪ್ರಸೂತಿ ಮೂವರು ನಾರದನಿಗಧಮ ॥ ೨೦ ॥

ನೀಲ ದೃಷ್ಟದ್ಯುಮ್ನ ಲವ ಈಲೇಲಿಹಾನನ ರೂಪಗಳು,
ಭೃಗು ಕಾಲಿಲೊದ್ದದರಿಂದ ಹರಿಯ ವ್ಯಾಧನೆನಿಸಿದನು,
ಏಳು ಋಷಿಗಳಿಗುತ್ತಮರು ಮುನಿ ಮೌಳಿ ನಾರದಗಧಮ ಮೂವರು,
ಫಾಳಿಯುತ ಪ್ರಹ್ಲಾದ ಬಾಹ್ಲಿಕರಾಯನೆನಿಸಿದನು ॥ ೨೧ ॥

ಜನಪ ಕರ್ಮಜರೊಳಗೆ ನಾರದ ಮುನಿ ಅನುಗ್ರಹ ಬಲದಿ-
ಪ್ರಹ್ಲಾದ ಅನಳ-ಭೃಗು-ದಾಕ್ಷಾಯಣಿಯರಿಗೆ ಸಮನೆನಿಸಿಕೊಂಬ,
ಮನುವಿವಸ್ವಾನ್ ಗಾಧಿಜ ಈರ್ವರು ಅನಳಗಿಂತಲಿ ಕಿಂಚಿತಾಧಮ-
ಎಣೆಯೆನಿಸುವರು ಸಪ್ತಋಷಿಗಳಿಗೆಲ್ಲ ಕಾಲದಲಿ ॥ ೨೨ ॥

ಕಮಲ ಸಂಭವ ಭವರೆನಿಪ ಸಂಯಮಿ ಮರೀಚೀ ಅತ್ರಿ ಅಂಗಿರ-ಸುಮತಿ-
ಪುಲಹಾಕ್ರತು ವಸಿಷ್ಠ ಪುಲಸ್ತ್ಯಮುನಿ ಸ್ವಾಹಾ ರಮಣಗಧಮರು,
ಮಿತ್ರನಾಮಕ ದ್ಯುಮಣಿ ರಾಹುಯುಕ್ತ ಭೀಷ್ಮಕ ಯಮಳರೂಪನು-
ತಾರನಾಮಕನೆನಿಸಿ ತ್ರೈತೆಯೊಳು ॥ ೨೩ ॥

ನಿರಋತಿಗೆರಡವತಾರ ದುರ್ಮುಖ ಹರಯುತ ಘಟೋತ್ಕಚನು,
ಪ್ರಾವಹಿ ಗುರುಮಡದಿ ತಾರಾಸಮರು ಪರ್ಜನ್ಯಗುತ್ತಮರು,
ಕರಿಗೊರಳ ಸಂಯುಕ್ತ ಭಗದತ್ತ ಅರಸು-ಕಥ್ಥನ ಧನಪರೂಪಗಳೆರಡು,
ವಿಘ್ನಪ ಚಾರುದೇಷ್ಣನು, ಅಶ್ವಿನಿಗಳು ಸಮ ॥ ೨೪ ॥

ದ್ರೋಣ ಧೃವ ದೋಷಾರ್ಕ ಅಗ್ನಿ ಪ್ರಾಣದ್ಯುವಿಭಾವಸುಗಳೆಂಟು,
ಕೃಶಾನು ಶ್ರೇಷ್ಠ ದ್ಯುನಾಮ ವಸು ಭೀಷ್ಮಾರ್ಯ ಬ್ರಹ್ಮಯುತ,
ದ್ರೋಣನಾಮಕ ನಂದಗೋಪ, ಪ್ರಧಾನ ಅಗ್ನಿಯನುಳಿದು ಏಳು ಸಮಾನರೆನಿಪರು-
ತಮ್ಮೊಳಗೆ ಜ್ಞಾನಾದಿಗುಣದಿಂದ ॥ ೨೫ ॥

ಭೀಮ-ರೈವತ-ಓಜ-ಅಜೈಕಪದ್-ಆ ಮಹನ್-ಬಹು ರೂಪಕನು-
ಭವ-ವಾಮ-ಉಗ್ರ-ವೃಷಾಕಪೀ-ಅಹಿರ್ಬುಧ್ನಿ ಯೆನಿಸುತಿಹ-
ಈ ಮಹಾತ್ಮರ ಮಧ್ಯದಲ್ಲಿ ಉಮಾಮನೋಹರ ಉತ್ತಮನು,
ದಶ ನಾಮಕರು ಸಮರೆನಿಸಿಕೊಂಬರು ತಮ್ಮೊಳೆಂದೆಂದು ॥ ೨೬ ॥

ಭೂರ್ಯ ಅಜೈಕಪದಾಹ್ವ ಅಹಿರ್ಬುಧ್ನೀರಯಿದು ರುದ್ರಗಣ ಸಂಯುತ,
ಭೂರಿಶ್ರವನೆಂದೆನಿಪ ಶಲ ವಿರುಪಾಕ್ಷ ನಾಮಕನು,
ಸೂರಿ ಕೃಪ ವಿಷ್ಕಂಭ, ಸಹದೇವಾ ರಣಾಗ್ರಣಿ,
ಸೋಮದತ್ತನು ತಾ ರಚಿಸಿದ ದ್ವಿರೂಪ ಧರೆಯೊಳು ಪತ್ರತಾಪಕನು ॥ ೨೭ ॥

ದೇವ ಶಕ್ರ ಉರುಕ್ರಮನು ಮಿತ್ರಾವರುಣ ಪರ್ಜನ್ಯ ಭಗ
ಪೂಷಾ ವಿವಸ್ವಾನ್ ಸವಿತೃಧಾತಾ ಆರ್ಯಮ ತ್ವಷ್ಟೃ-
ದೇವಕೀ ಸುತನಲ್ಲಿ ಸವಿತೃ ವಿಭಾವಸೂಸುತ ಭಾನುಯೆನಿಸುವ,
ಜ್ಯಾವನಪಯುತ ವೀರಸೇನನು ತ್ವಷ್ಟೃನಾಮಕನು ॥ ೨೮ ॥

ಎರಡಧಿಕ ದಶ ಸೂರ್ಯರೊಳು ಮೂರೆರಡು ಜನರುತ್ತಮ,
ವಿವಸ್ವಾನ್ ವರುಣ ಶಕ್ರ ಉರುಕ್ರಮನು ಪರ್ಜನ್ಯ ಮಿತ್ರಾಖ್ಯ,
ಮರುತನಾವೇಶಯುತ ಪಾಂಡೂವರ ಪರಾವಹನೆಂದೆನಿಪ,
ಕೇಸರಿ ಮೃಗಪ ಸಂಪಾತಿ ಶ್ವೇತತ್ರಯರು ಮರುದಂಶ ॥ ೨೯ ॥

ಪ್ರತಿಭವಾತನು ಚೇಕಿತನು, ವಿಪೃಥುವೆನಿಸುವನು ಸೌಮ್ಯ ಮಾರುತ,
ವಿತತ ಸರ್ವೋತ್ತುಂಗ ಗಜನಾಮಕರು ಪ್ರಾಣಾಂಶ,
ದ್ವಿತಿಯ ಅಪಾನ ಗವಾಕ್ಷ, ಗವಯ ತೃತಿಯ ವ್ಯಾನ,
ಉದಾನ ವೃಷಪರ್ವ, ಅತುಳ ಶರ್ವತ್ರಾತ ಗಂಧ ಸುಮಾದನರುಸಮಾನ ॥ ೩೦ ॥

ಐವರೊಳಗೀ ಕುಂತಿ ಭೋಜನು ಆವಿನಾಮಕ,
ನಾಗ ಕೃಕಲನು ದೇವದತ್ತ ಧನಂಜಯರು ಅವತಾರ ವರ್ಜಿತರು,
ಆವಹೋದ್ವಹ ವಿವಹ ಸಂವಹ ಪ್ರಾವಹೀಪತಿ ಮರುತ ಪ್ರವಹನಿಗಾವಕಾಲಕು-
ಕಿಂಚಿತಧಮರು ಮರುದ್ಗಣರೆಲ್ಲ ॥ ೩೧ ॥

ಪ್ರಾಣ–ಅಪಾನ–ವ್ಯಾನ–ಉದಾನ–ಸಮಾನರೈವರನುಳಿದು ಮರುತರು ಊನರೆನಿಪರು,
ಹತ್ತು ವಿಶ್ವೇದೇವರಿವರಿಂದ,
ಸೂನುಗಳು ಯೆನಿಸುವರು ಐವರಮಾನಿನೀ ದ್ರೌಪತಿಗೆ,
ಕೆಲವರು ಕ್ಷೋಣಿಯೊಳು ಕೈಕೇಯರೆನಿಪರು ಎಲ್ಲ ಕಾಲದಲಿ ॥ ೩೨ ॥

ಪ್ರತಿವಿಂಧ್ಯ ಶ್ರುತಸೋಮ ಶ್ರುತ ಕೀರುತಿ ಶತಾನಿಕ ಶ್ರುತ ಕರ್ಮ,
ದ್ರೌಪತಿ ಕುವರರಿವರೊಳಗೆ ಅಭಿತಾಮ್ರ ಪ್ರಮುಖ ಚಿತ್ರ–
ರಥನು ಗೋಪ ಕಿಶೋರ ಬಲರೆಂಬತುಲರೈಗಂಧರ್ವರಿಂದಲಿ ಯುತರು,
ಧರ್ಮ ವೃಕೋದರಾದಿಜರೆಂದು ಕರೆಸುವರು ॥ ೩೩ ॥

ವಿವಿದ ಮೈಂದರು ನಕುಲ ಸಹದೇವ ವಿಭು ತ್ರಿಶಿಖಾಶ್ವಿನಿಗಳಿವರೊಳು–
ದಿವಿಪನಾವೇಶವಿಹುದೆಂದಿಗು,
ದ್ಯಾವಾ ಪೃಥ್ವಿ ಋಭು ಪವನಸುತ ವಿಷ್ವಕ್ಸೇನನು ಉಮಾಕುವರ ವಿಘ್ನಪ ಧನಪ–
ಮೊದಲಾದವರು ಮಿತ್ರಗೆ ಕಿಂಚಿತಾಧಮರೆನಿಸಿಕೊಳುತಿಹರು ॥ ೩೪ ॥

ಪಾವಕಾಗ್ನಿ ಕುಮಾರನೆನಿಸುವ ಚಾವನ ಉಚಿಥ್ಯಮುನಿ,
ಚಾಕ್ಷುಷ ರೈವತ ಸ್ವಾವರೋಚಿಷೋತ್ತಮ ಬ್ರಹ್ಮ ರುದ್ರೇಂದ್ರ–
ದೇವ ಧರ್ಮನು ದಕ್ಷ ನಾಮಕ ಸಾವರಣಿ ಶಶಿಬಿಂದು ಪೃಥು–
ಪ್ರೀಯವ್ರತನು ಮಾಂಧಾತ ಗಯನು ಕಕುಸ್ಥ ದೌಷ್ಯಂತಿ ॥ ೩೫ ॥

ಭರತ ಋಷಭಜ ಹರಿಣಿಜ ದ್ವಿಜ ಭರತ ಮೊದಲಾದಖಿಳರಾಯರೊಳಿರುತಿಹುದು–
ಶ್ರೀವಿಷ್ಣು ಪ್ರಾಣಾವೇಶ ಪ್ರತಿದಿನದಿ,
ವರದಿವಸ್ಪತಿ ಶಂಭುರದ್ಭುತ ಕರೆಸುವನು ಬಲಿ ವಿಧೃತ ಧೃತ–
ಶುಚಿ ನೆರೆಖಲೂಕೃತಧಾಮ ಮೊದಲಾದಷ್ಟಗಂಧರ್ವ ॥ ೩೬ ॥

ಅರಸುಗಳು ಕರ್ಮಜರು ವೈಶ್ವಾನರಗಧಮ ಶತಗುಣದಿ,
ವಿಘ್ನೇಶ್ವರಗೆ ಕಿಂಚಿದ್ಗುಣ ಕಡಿಮೆ ಬಲಿ ಮುಖ್ಯ ಪಾವಕರು,
ಶರಭ ಪರ್ಜನ್ಯಾಖ್ಯಮೇಘಪ, ತರಣಿ ಭಾರ್ಯಾ ಸಂಜ್ಞೆ,
ಶಾರ್ವರಿಕರನ ಪತ್ನೀ ರೋಹಿಣೀ, ಶಾಮಲಾ, ದೇವಕಿಯು ॥ ೩೭ ॥

ಅರಸಿಯೆನಿಪಳು ಧರ್ಮರಾಜಗೆ, ವರುಣ ಭಾರ್ಯೋಷಾದಿಷಟ್ಕರು–
ಕೊರತೆ ಯೆನಿಪರು ಪಾವಕಾದ್ಯರಿಗೆರಡು ಗುಣದಿಂದ,
ಎರಡು ಮೂರ್ಜನರಿಂದಧಮ ಸ್ವಹ ಕರೆಸುವಳು,
ಉಷಾದೇವಿ ವೈಶ್ವಾನರನ ಮಡದಿಗೆ ದಶಗುಣಾವರಳಶ್ವಿನೀ ಭಾರ್ಯಾ ॥ ೩೮ ॥

ಸುದರುಶನ ಶಕ್ರಾದಿ ಸುರಯುತ ಬುಧನು ತಾನಭಿಮನ್ಯುವೆನಿಸುವ,
ಬುಧನಿಗಿಂತಾಶ್ವಿನೀ ಭಾರ್ಯ ಶಲ್ಯಮಾಗಧರ ಉದರಜ,
ಉಷಾದೇವಿಗಿಂತಲಿ ಅಧಮನೆನಿಪ ಶನೈಶ್ಚರನು,
ಶನಿಗಧಮ ಪುಷ್ಕರ ಕರ್ಮಪನು ಯೆನಿಸುವನು ಬುಧರಿಂದ ॥ ೩೯ ॥

ಉದ್ವಹಾ ಮರುತಾನ್ವಿತ ವಿರಾಧ ದ್ವಿತಿಯ ಸಂಜಯನು ತುಂಬುರ,
ವಿದ್ವದುತ್ತಮ ಜನ್ಮೇಜಯ ತ್ವಷ್ಟೃಯುತ ಚಿತ್ರರಥ,
ಸದ್ವಿನುತ ದಮಘೋಷಕ ಕಬಂಧದ್ವಯರು ಗಂಧರ್ವದನು,
ಮನುಪದ್ಮಸಂಭವಯುತಾಕ್ರೂರ ಕಿಶೋರನೆನಿಸುವನು ॥ ೪೦ ॥

ವಾಯುಯುತ ಧೃತರಾಷ್ಟ್ರ ದಿವಿಜರ ಗಾಯಕನು ಧೃತರಾಷ್ಟ್ರ,
ನಕ್ರನು ರಾಯ ದ್ರುಪದನು ವಹ ವಿಶಿಷ್ಟಾ ಹೂಹು ಗಂಧರ್ವ,
ನಾಯಕ ವಿರಾಡ್ವಿವಹ ಹಾಹಾಜ್ಞೇಯ,
ವಿದ್ಯಾಧರನೆ ಅಜಗರ ತಾ ಯೆನಿಸುವನು, ಉಗ್ರಸೇನನೆ ಉಗ್ರಸೇನಾಖ್ಯ ॥೪೧ ॥

ಬಿಸಜ ಸಂಭವ ಯುಕ್ತ ವಿಶ್ವಾವಸು ಯುಧಾಮನ್ಯು,
ಉತ್ತ ಮೌಜಸ ಬಿಸಜ ಮಿತ್ರಾರ್ಯಮಯುತ ಪರಾವಸುಯೆನಿಸುತಿಪ್ಪ,
ಅಸಮ ಮಿತ್ರಾನ್ವಿತನು ಸತ್ಯಜಿತು ವಸುಧಿಯೊಳು ಚಿತ್ರಸೇನ,
ಅಮೃತಾಂಧಸರು ಗಾಯಕರೆಂದು ಕರೆಸುವರಾವ ಕಾಲದಲಿ ॥ ೪೨ ॥

ಉಳಿದ ಗಂಧರ್ವರುಗಳೆಲ್ಲರು ಬಲಿ ಮೊದಲು ಗೋಪಾಲರೆನಿಪರು,
ಇಳೆಯೊಳಗೆ ಸೈರೇಂಧ್ರಿ ಪಿಂಗಳೆ ಅಪ್ಸರ ಸ್ತ್ರೀಯಳು,
ತಿಲೋತ್ತಮೆಯು ಪೂರ್ವದಲಿ ನಕುಲನ ಲಲನೆ ಪಾರ್ವತಿ ಯೆನಿಸುವಳು,
ಗೋಕುಲದ ಗೋಪಿಯರೆಲ್ಲ ಶಬರೀ ಮುಖ್ಯ ಅಪ್ಸರರು ॥ ೪೩ ॥

ಕೃಷ್ಣವರ್ತ್ಮನ ಸುತರೊಳಗೆ-ಶತ ದ್ವ್ಯೈಷ್ಟ ಸಾವಿರ ಸ್ತ್ರೀಯರಲ್ಲಿ-
ಪ್ರವಿಷ್ಟಳಾಗಿ ರಮಾಂಬ ತತ್ತನ್ನಾಮ ರೂಪದಲಿ ಕೃಷ್ಣಮಹಿಷಿಯರೊಳಗೆ ಇಪ್ಪಳು,
ತ್ವಷ್ಟೃ ಪುತ್ರಿ ಕಶೇರು ಇವರೊಳು ಶ್ರೇಷ್ಠಳೆನಿಪಳು,
ಉಳಿದ ಋಷಿಗಣ ಗೋಪಿಕಾ ಸಮರು ॥ ೪೪ ॥

ಸೂನುಗಳು ಯೆನಿಸುವರು ದೇವ ಕೃಶಾನುವಿಗೆ ಕ್ರಥು ಸಿಂಧು ಶುಚಿ ಪವಮಾನ ಕೌಶಿಕರೈದು,
ತುಂಬುರು ಊರ್ವಶೀಶತರು,
ಮೇನಕಾ ಋಷಿ ರಾಯರುಗಳಾಜಾನು ಸುರರಿಗೆ ಸಮರೆನಿಪರು,
ಸುರಾಣಕರನಾಖ್ಯಾತ ದಿವಿಜರ ಜನಕರೆನಿಸುವರು ॥ ೪೫ ॥

ಪಾವಕರಿಗಿಂತಧಮರೆನಿಸುವ ದೇವ ಕುಲಜಾನಾಖ್ಯ ಸುರಗಣ ಕೋವಿದರು,
ನಾನಾ ಸುವಿದ್ಯದಿ ಸೋತ್ತಮರ ನಿತ್ಯ ಸೇವಿಪರು ಸದ್ಭಕ್ತಿ ಪೂರ್ವಕ,
ಸ್ವಾವರರಿಗುಪದೇಶಿಸುವರು,
ನಿರಾವಲಂಬನ ವಿಮಲ ಗುಣಗಳ ಪ್ರತಿ ದಿವಸದಲ್ಲಿ ॥ ೪೬ ॥

ಸುರರೊಳಗೆ ವರ್ಣಾಶ್ರಮಗಳೆಂಬೆರಡು ಧರ್ಮಗಳಿಲ್ಲ-
ತಮ್ಮೊಳು ನಿರುಪಮರು ಯೆಂದೆನಿಸಿಕೊಂಬರು ತಾರತಮ್ಯದಲಿ,
ಗುರು ಸುಶಿಷ್ಯತ್ವವೀ ಋಷಿಗಳೊಳಗಿರುತಿಹುದು,
ಆಜಾನ ಸುರರಿಗೆ ಚಿರ ಪಿತೃ ಶತಾಧಮರೆನಿಸುವರು ಏಳು ಜನರುಳಿದು ॥ ೪೭ ॥

ಚಿರ ಪಿತೃಗಳಿಂದಧಮ ಗಂಧರ್ವರುಗಳೆನಿಪರು,
ದೇವನಾಮಕ ಕೊರತೆಯೆನಿಸುವ, ಚಕ್ರವರ್ತಿಗಳಿಂದ ಗಂಧರ್ವ,
ನರರೊಳುತ್ತಮರೆನಿಸುವರು, ಹನ್ನೆರಡು ಎಂಭತ್ತೆಂಟು ಗುಣದಲಿ ಹಿರಿಯರೆನಿಪರು,
ಕ್ರಮದಿ ದೇವಾವೇಶ ಬಲದಿಂದ ॥ ೪೮ ॥

ದೇವತೆಗಳಿಂ ಪ್ರೇಷ್ಯರೆನಿಪರು ದೇವ ಗಂಧರ್ವರುಗಳು,
ಈವರಿಂದಾವ ಕಾಲಕು ಶಿಕ್ಷಿತರು ನರನಾಮ ಗಂಧರ್ವ,
ಕೇವಲತಿ ಸದ್ಭಕ್ತಿ ಪೂರ್ವಕ ಯಾವದಿಂದ್ರಿಯಗಳ ನಿಯಾಮಕ-
ಶ್ರೀವರನೆ ಎಂದರಿದು ಭಜಿಪರು ಮಾನುಷೋತ್ತಮರು ॥ ೪೯ ॥

ಬಾದರಾಯಣ ಭಾಗವತ ಮೊದಲಾದ ಶಾಸ್ತ್ರಗಳಲ್ಲಿ-
ಬಹು ವಿಧ ದ್ವಾದಶ ದಶ ಸುಪಂಚವಿಂಶತಿ ಶತ ಸಹಸ್ರಯುತ ಭೇದಗಳ ಪೇಳಿದನು,
ಸೋತ್ತಮ ಆದಿತೇಯಾವೇಶ ಬಲದಿ, ವಿರೋಧ ಚಿಂತಿಸಬಾರದು,
ಇದು ಸಾಧುಜನ ಸಮ್ಮತವು ॥ ೫೦ ॥

ಇವರು ಮುಕ್ತಿಯೋಗ್ಯರೆಂಬರು, ಶ್ರವಣ ಮನನಾದಿಗಳ ಪರವೋತ್ಸವದಿ ಮಾಡುತ-
ಕೇಳಿನಲಿಯುತ ಧರ್ಮಕಾಮಾರ್ಥ ತ್ರಿವಿಧ ಫಲವಾಪೇಕ್ಷಿಸದೆ,
ಶ್ರೀ ಪವನಮುಖ ದೇವಾಂತರಾತ್ಮಕ ಪ್ರವರ ತಮ-
ಶಿಷ್ಟೇಷ್ಟದಾಯಕನೆಂದು ಸ್ಮರಿಸುವರು ॥ ೫೧ ॥

ನಿತ್ಯಸಂಸಾರಿಗಳು ಗುಣ ದೋಷಾತ್ಮಕರು,
ಬ್ರಹ್ಮಾದಿ ಜೀವರ ಭೃತ್ಯರೆಂಬರು ರಾಜನೋಪಾದಿಯಲಿ ಹರಿಯೆಂಬ,
ಕೃತ್ತಿವಾಸನು ಬ್ರಹ್ಮ ಶ್ರೀವಿಷ್ಣುತ್ರಯರು ಸಮ,
ದು:ಖ ಸುಖ ಉತ್ಪತ್ತಿ ಮೃತಿ ಭಯ ಪೇಳುವರು ಅವತಾರಗಳಿಗೆ ಸದಾ ॥ ೫೨ ॥

ತಾರತಮ್ಯಜ್ಞಾನವಿಲ್ಲದೆ ಸೂರಿಗಳ ನಿಂದಿಸುತ–
ನಿತ್ಯದಿ ತೋರುತಿಪ್ಪರು ಸುಜನರೋಪಾದಿಯಲಿ ನರರೊಳಗೆ,
ಕ್ರೂರ ಕರ್ಮಾಸಕ್ತರಾಗಿ ಶರೀರ ಪೋಷಣೆಗೋಸುಗದಿ ಸಂಚಾರ ಮಾಳ್ಪರು–
ಅನ್ಯದೇವತೆ ನೀಚರಾಲಯದಿ ॥ ೫೩ ॥

ದಶಪ್ರಮತಿ ಮತಾಬ್ಧಿಯೊಳು ಸುಮನಸರೆನಿಪ ರತ್ನಗಳನವಲೋಕಿಸಿ ತೆಗೆದು–
ಪ್ರಾಕೃತ ಸುಭಾಷಾ ತಂತುಗಳ ರಚಿಸಿ–
ಅಸುಪತಿ ಶ್ರೀರಮಣನಿಗೆ ಸಮರ್ಪಿಸಿದೆ,
ಸಜ್ಜನರಿದನು ಸಂತೋಷಿಸಲಿ, ದೋಷಗಳೆಣಿಸದಲೆ ಕಾರುಣ್ಯದಲಿ ನಿತ್ಯ ॥ ೫೪ ॥

ನಿರುಪಮನು ಶ್ರೀವಿಷ್ಣು ಲಕ್ಷ್ಮೀ ಸರಸಿಜೋದ್ಭವ ವಾಯು ವಾಣೀ–
ಗರುಡ ಷಣ್ಮಹಿಷಿಯರು ಪಾರ್ವತಿ ಶಕ್ರ ಸ್ಮರ ಪ್ರಾಣ–
ಗುರು ಬೃಹಸ್ಪತಿ ಪ್ರವಹ ಸೂರ್ಯನು ವರುಣ ನಾರದ ವಹ್ನಿ–
ಸಪ್ತಾಂಗಿರರು ಮಿತ್ರ ಗಣೇಶ ಪೃಥು ಗಂಗಾ ಸ್ವಾಹಾ ಬುಧನು ॥ ೫೫ ॥

ತರಣಿ ತನಯ ಶನೈಶ್ಚರನು ಪುಷ್ಕರನಜಾನಜ ಚಿರಪಿತರು–
ಗಂಧರ್ವರೀರ್ವರು ದೇವ ಮಾನುಷ ಚಕ್ರವರ್ತಿಗಳು–
ನರರೊಳುತ್ತಮ ಮಧ್ಯಮಾಧಮ ಕರೆಸುವರು ಮಧ್ಯೋತ್ತಮರು–
ಈರೆರಡು ಜನ ಕೈವಲ್ಯ ಮಾರ್ಗಸ್ಥರಿಗೆ ಆನಮಿಪೆ ॥ ೫೬ ॥

ಸಾರ ಭಕ್ತಿ ಜ್ಞಾನದಿಂ ಬೃಹತ್ತಾರತಮ್ಯವನರಿತು ಪಠಿಸುವ ಸೂರಿಗಳಿಗೆ,
ಅನುದಿನದಿ ಪುರುಷಾರ್ಥಗಳ ಪೂರೈಸಿ–
ಕಾರುಣಿಕ ಮರುತಾಂತರಾತ್ಮಕ ಮಾರಮಣ ಜಗನ್ನಾಥ ವಿಠಲ–
ತೋರಿಕೊಂಬನು ಹೃತ್ಕಮಲದೊಳು ಯೋಗ್ಯತೆಯನರಿತು ॥ ೫೭ ॥

॥ ಇತಿ ಶ್ರೀ ಬೃಹತ್ತಾರತಮ್ಯ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

॥ ೨೪. ಶ್ರೀ ಕಲ್ಪಸಾಧನ ಸಂಧಿ ॥
॥ ೨೪. ಶ್ರೀ ಅಪರೋಕ್ಷ ತಾರತಮ್ಯ ಸಂಧಿ ॥

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ,
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥

ಏಕವಿಂಶತಿ ಮತ ಪ್ರವರ್ತಕ ಕಾಕು ಮಾಯ್ಗಳ ಕುಹಕ ಯುಕ್ತಿ ನಿರಾಕರಿಸಿ-
ಸರ್ವೋತ್ತಮನು ಹರಿಯೆಂದು ಸ್ಥಾಪಿಸಿದ-
ಶ್ರೀಕಳತ್ರನ ಸದನ, ದ್ವಿಜಪ ಪಿನಾಕಿಸನ್ನುತ ಮಹಿಮ,
ಪರಮ ಕೃಪಾಕಟಾಕ್ಷದಿ ನೋಡು ಮಧ್ವಾಚಾರ್ಯ ಗುರುವರ್ಯ ॥ ೧ ॥

ವೇಧ ಮೊದಲಾಗಿಪ್ಪಮಲ ಮೊಕ್ಷಾಧಿಕಾರಿಗಳಾದ ಜೀವರ,
ಸಾಧನಗಳಪರೋಕ್ಷ ನಂತರ ಲಿಂಗ ಭಂಗವನು,
ಸಾಧುಗಳು ಚಿತ್ತಯಿಪುದು ಎನ್ನಪರಾಧಗಳ ನೋಡದಲೆ,
ಚಕ್ರ ಗದಾಧರನು ಪೇಳಿಸಿದ ತೆರದಂದದಲಿ ಪೇಳುವೆನು ॥ ೨ ॥

ತೃಣಕೃಮಿ ದ್ವಿಜ ಪಶು ನರೋತ್ತಮ ಜನಪ ನರಗಂಧರ್ವಗಣರು,
ಇವರೆನಿಪರಂಶವಿಹೀನ ಕರ್ಮ ಸುಯೋಗಿಗಳು ಯೆಂದು,
ತನುಪ್ರತೀಕದಿ ಬಿಂಬನ ಉಪಾಸನವ ಗೈಯುತ,
ಇಂದ್ರಿಯಜ ಕರ್ಮ ಅನವರತ ಹರಿಗರ್ಪಿಸುತ ನಿರ್ಮಮರು ಯೆನಿಸುವರು ॥ ೩ ॥

ಏಳು ವಿಧ ಜೀವ ಗಣ ಬಹಳ, ಸುರಾಳಿ ಸಂಖ್ಯಾ ನೇಮವುಳ್ಳದು,
ತಾಳಿ ನರದೇಹವನು ಬ್ರಾಹ್ಮಣರ ಕುಲದೊಳುದ್ಭವಿಸಿ-
ಸ್ಥೂಲಕರ್ಮವ ತೊರೆದು ಗುರುಗಳು ಪೇಳಿದರ್ಥವ ತಿಳಿದು,
ತತ್ತತ್ಕಾಲ ಧರ್ಮ ಸಮರ್ಪಿಸುವವರು ಕರ್ಮಯೋಗಿಗಳು ॥ ೪ ॥

ಹೀನ ಕರ್ಮಗಳಿಂದ ಬಹುವಿಧ ಯೋನಿಯಲಿ ಸಂಚರಿಸಿ-
ಪ್ರಾಂತಕೆ ಮಾನುಷತ್ವವನೈದಿ ಸರ್ವೋತ್ತಮನು ಹರಿಯೆಂಬ-
ಜ್ಞಾನ ಭಕ್ತಿಗಳಿಂದ ವೇದೋಕ್ತಾನುಸಾರ ಸಹಸ್ರ ಜನ್ಮ-
ಅನ್ಯೂನ ಕರ್ಮವ ಮಾಡಿ ಹರಿಗರ್ಪಿಸಿದ ನಂತರದಿ ॥ ೫ ॥

ಹತ್ತು ಜನ್ಮಗಳಲ್ಲಿ ಹರಿ ಸರ್ವೋತ್ತಮನು, ಸುರಾಸುರ ಗಣಾರ್ಚಿತ,
ಚಿತ್ರಕರ್ಮ, ವಿಶೋಕನಂತಾನಂತ ರೂಪಾತ್ಮ,
ಸತ್ಯಸತ್ಸಂಕಲ್ಪ, ಜಗದುತ್ಪತ್ತಿ ಸ್ಥಿತಿಲಯಕಾರಣ,
ಜರಾ ಮೃತ್ಯುವರ್ಜಿತನೆಂದುಪಾಸನೆ ಗೈದ ತರುವಾಯ ॥ ೬ ॥

ಮೂರು ಜನ್ಮಗಳಲ್ಲಿ ದೇಹಾಗಾರ ಪಶುಧನ ಪತ್ನಿ ಮಿತ್ರ ಕುಮಾರ–
ಮಾತಾ ಪಿತೃಗಳಲ್ಲಿಹ ಸ್ನೇಹಗಿಂತಧಿಕ ಮಾರಮಣನಲಿ ಬಿಡದೆ ಮಾಡುವ ಸೂರಿಗಳು,
ಈ ಉಕ್ತ ಜನ್ಮವ ಮೀರಿ,
ಪರಮಾತ್ಮನ ಸ್ವದೇಹದಿ ನೋಡಿ ಸುಖಿಸುವರು ॥ ೭ ॥

ದೇವಗಾಯಕ ಅಜಾನ ಚಿರಪಿತೃ ದೇವರೆಲ್ಲರು ಜ್ಞಾನಯೋಗಿಗಳು,
ಆವ ಕಾಲಕು ಪುಷ್ಕರ ಶನೈಶ್ಚರ ಉಷಾ ಸ್ವಾಹಾದೇವಿ ಬುಧ ಸನಕಾದಿಗಳು–
ಮೇಘಾವಳಿಪ ಪರ್ಜನ್ಯಸಾಂಶರು,
ಈ ಉಭಯಗಣದೊಳಗಿವರು ವಿಜ್ಞಾನ ಯೋಗಿಗಳು ॥ ೮ ॥

ಭರತಖಂಡದಿ ನೂರು ಜನ್ಮವ ಧರಿಸಿ ನಿಷ್ಕಾಮುಕ ಸುಕರ್ಮಾಚರಿಸಿದಾನಂತರದಿ–
ದಶ ಸಹಸ್ರ ಜನ್ಮದಲಿ ಉರುತರ ಜ್ಞಾನವನು,
ಮೂರೈದೆರಡು ದಶ ದೇಹದಲಿ ಭಕ್ತಿಯ–
ನಿರವಧಿಕನಲಿ ಮಾಡಿ ಕಾಂಬರು ಬಿಂಬರೂಪವನು ॥ ೯ ॥

ಸಾಧನಾತ್ಪೂರ್ವದಲಿ ಇವರಿಗನಾದಿಕಾಲಪರೋಕ್ಷವಿಲ್ಲ,
ನಿಷೇಧ ಕರ್ಮಗಳಿಲ್ಲ, ನರಕಪ್ರಾಪ್ತಿ ಮೊದಲಿಲ್ಲ,
ವೇದ ಶಾಸ್ತ್ರಗಳಲ್ಲಿ ಇಪ್ಪ ವಿರೋಧ ವಾಕ್ಯವ ಪರಿಹರಿಸಿ,
ಮಧುಸೂದನನೆ ಸರ್ವೋತ್ತಮೋತ್ತಮನೆಂದು ತುತಿಸುವರು ॥ ೧೦ ॥

ಸತ್ಯಲೋಕಾಧಿಪನವಿಡಿದು ಶತಸ್ಥ ದೇವಗಣಾಂತ ಎಲ್ಲರು–
ಭಕ್ತಿಯೋಗಿಗಳೆಂದು ಕರೆಸುವರಾವ ಕಾಲದಲಿ,
ಭಕ್ತಿಯೋಗ್ಯರ ಮಧ್ಯದಲಿ ಸದ್ಭಕ್ತಿ ವಿಜ್ಞಾನಾದಿ ಗುಣದಿಂದ–
ಉತ್ತಮೋತ್ತಮ ಬ್ರಹ್ಮ ವಾಯೂ ವಾಣಿ ವಾಗ್ದೇವಿ ॥ ೧೧ ॥

ಋಜುಗಣಕೆ ಭಕ್ತ್ಯಾದಿಗುಣ ಸಾಹಜವೆನಿಸುವವು, ಕ್ರಮದಿ ವೃದ್ಧಿ,
ಅಬ್ಜಜ ಪದವಿ ಪರ್ಯಂತ ಬಿಂಬೋಪಾಸನವು ಅಧಿಕ,
ವೃಜಿನ ವರ್ಜಿತ ಎಲ್ಲರೊಳು ತ್ರಿಗುಣಜ ವಿಕಾರಗಳಿಲ್ಲವೆಂದಿಗು,
ದ್ವಿಜ ಫಣಿಪ ಮೃಡ ಶಕ್ರ ಮೊದಲಾದವರೊಳಿರುತಿಹವು ॥ ೧೨ ॥

ಸಾಧನಾತ್ಪೂರ್ವದಲಿ ಈ ಋಜ್ವಾದಿ ತಾತ್ವಿಕರೆನಿಪ ಸುರಗಣ,
ಅನಾದಿ ಸಾಮಾನ್ಯಾಪರೋಕ್ಷಿಗಳೆಂದು ಕರೆಸುವರು,
ಸಾಧನೋತ್ತರ ಸ್ವಸ್ವಬಿಂಬ ಉಪಾಧಿರಹಿತಾದಿತ್ಯನಂದದಿ–
ಸಾದರದಿ ನೋಡುವರು ಅಧಿಕಾರಾನುಸಾರದಲಿ ॥ ೧೩ ॥

ಭಿನ್ನ ಭಕ್ತರು ಎನಿಸುತಿಹರು ಸುಪರ್ಣ ಶೇಷಾದ್ಯಮರರೆಲ್ಲ,
ಅಚ್ಛಿನ್ನ ಭಕ್ತರು ನಾಲ್ವರೆನಿಪರು ಭಾರತೀ ಪ್ರಾಣ ಸೊನ್ನೊಡಲ ವಾಗ್ದೇವಿಯರು,
ಪಣೆಗಣ್ಣ ಮೊದಲಾದವರೊಳಗೆ-
ತತ್ತನ್ನಿಯಾಮಕರಾಗಿ ವ್ಯಾಪಾರವನು ಮಾಡುವರು ॥ ೧೪ ॥

ಹೀನಸತ್ಕರ್ಮಗಳೆರಡು ಪವಮಾನದೇವನು ಮಾಳ್ಪನು,
ಇದಕನುಮಾನವಿಲ್ಲೆಂದೆನುತ ದೃಢ ಭಕ್ತಿಯಲಿ ಭಜಿಪರ್ಗೆ-
ಪ್ರಾಣಪತಿ ಸಂಪ್ರೀತನಾಗಿ ಕುಯೋನಿಗಳ ಕೊಡ,
ಎಲ್ಲ ಕರ್ಮಗಳಾನೆ ಮಾಡುವೆನೆಂಬ ಮನುಜರ ನರಕಕೈದಿಸುವ ॥ ೧೫ ॥

ದೇವಋಷಿ ಪಿತೃ-ಪ ನರರೆನಿಸುವ ಐವರೊಳು ನೆಲೆಸಿದ್ದು,
ಅವರ ಸ್ವಭಾವ ಕರ್ಮವ ಮಾಡಿ ಮಾಡಿಪ ಒಂದು ರೂಪದಲಿ,
ಭಾವಿ ಬ್ರಹ್ಮನು ಕೂರ್ಮ ರೂಪದಿ-
ಈ ವಿರಿಂಚಾಂಡವನು ಬೆನ್ನಿಲಿ ತಾ ವಹಿಸಿ ಲೋಕಗಳ ಪೊರೆವನು ದ್ವಿತಿಯ ರೂಪದಲಿ ॥ ೧೬ ॥

ಗುಪ್ತನಾಗಿದ್ದನಿಲ ದೇವ ದ್ವಿಸಪ್ತಲೋಕದ ಜೀವರೊಳಗೆ,
ತ್ರಿಸಪ್ತಸಾವಿರದಾರು ನೂರು ಶ್ವಾಸ ಜಪಗಳನು,
ಸುಪ್ತಿ ಸ್ವಪ್ನದಿ ಜಾಗ್ರತಿಗಳಲಿ ಆಪ್ತನಂದದಿ ಮಾಡಿ ಮಾಡಿಸಿ,
ಕ್ಲುಪ್ತ ಭೋಗಗಳೀವ ಪ್ರಾಂತಕೆ ತೃತೀಯ ರೂಪದಲಿ ॥ ೧೭ ॥

ಶುದ್ಧ ಸತ್ವಾತ್ಮಕ ಶರೀರದೊಳಿದ್ದ ಕಾಲಕು ಲಿಂಗದೇಹವು ಬದ್ಧವಾಗದು,
ದಗ್ಧ ಪಟದೋಪಾದಿ ಇರುತಿಹುದು,
ಸಿದ್ಧ ಸಾಧನ ಸರ್ವರೊಳಗನವದ್ಯ ನೆನಿಸುವ,
ಗರುಡ ಶೇಷ ಕಪರ್ದಿ ಮೊದಲಾದಮರರೆಲ್ಲರು ದಾಸರೆನಿಸುವರು ॥ ೧೮ ॥

ಗಣದೊಳಗೆ ತಾನಿದ್ದು ಋಜುವೆಂದೆನಿಸಿಕೊಂಬನು,
ಕಲ್ಪಶತ ಸಾಧನವ ಗೈದಾನಂತರದಿ ತಾ ಕಲ್ಕಿಯೆನಿಸುವನು,
ದ್ವಿನವಶೀತಿಯ ಪ್ರಾಂತಭಾಗದಿ ಅನಿಲ ಹನುಮದ್ಭೀಮರೂಪದಿ-
ದನುಜರೆಲ್ಲರ ಸದೆದು ಮಧ್ವಾಚಾರ್ಯರೆನಿಸಿದನು ॥ ೧೯ ॥

ವಿಶ್ವವ್ಯಾಪಕ ಹರಿಗೆ ತಾ ಸಾದೃಶ್ಯ ರೂಪವ ಧರಿಸಿ,
ಬ್ರಹ್ಮ ಸರಸ್ವತೀ ಭಾರತಿಗಳಿಂದೊಡಗೂಡಿ ಪವಮಾನ,
ಶಾಶ್ವತ ಸುಭಕ್ತಿಯಲಿ ಸುಜ್ಞಾನ ಸ್ವರೂಪನ ರೂಪ ಗುಣಗಳ,
ಅನಶ್ವರವು ಎಂದೆನುತ ಪೊಗಳುವ ಶ್ರುತಿಗಳೊಳಗಿದ್ದು ॥ ೨೦ ॥

ಖೇಟ ಕುಕ್ಕುಟ ಜಲಟವೆಂಬ ತ್ರಿಕೋಟಿ ರೂಪವ ಧರಿಸಿ,
ಸತತ ನಿಶಾಟರನು ಸಂಹರಿಸಿ ಸಲಹುವ ಸರ್ವ ಸಜ್ಜನರ,
ಕೈಟಭಾರಿಯ ಪುರದ ಪ್ರಥಮ ಕವಾಟವೆನಿಸುವ,
ಗರುಡ ಶೇಷ ಲಲಾಟಲೋಚನ ಮುಖ್ಯ ಸುರರಿಗೆ ಆವಕಾಲದಲಿ ॥ ೨೧ ॥

ಈ ಋಜುಗಳೊಳಗೊಬ್ಬ ಸಾಧನ ನೂರು ಕಲ್ಪದಿ ಮಾಡಿ ಕರೆಸುವ,
ಚಾರುತರ ಮಂಗಳ ಸುನಾಮದಿ ಕಲ್ಪ ಕಲ್ಪದಲಿ,
ಸೂರಿಗಳು ಸಂಸ್ತುತಿಸಿ ವಂದಿಸೆ ಘೋರದುರಿತಗಳಳಿದು ಪೋಪುವು,
ಮಾರರಮಣ ಸಂಪ್ರೀತನಾಗುವ ಸರ್ವ ಕಾಲದಲಿ ॥ ೨೨ ॥

ಪಾಹಿ ಕಲ್ಕಿ–ಸುತೇಜ–ದಾಸನೆ, ಪಾಹಿ ಧರ್ಮ–ಅಧರ್ಮ ಖಂಡನೆ,
ಪಾಹಿ ವರ್ಚಸ್ವೀ–ಋಷಣ, ನಮೋ ಸಾಧು–ಮಹೀಪತಿಯೆ,
ಪಾಹಿ ಸದ್ಧರ್ಮಜ್ಞ–ಧರ್ಮಜ, ಪಾಹಿ ಸಂಪೂರ್ಣ–ಶುಚಿ–ವೈಕೃತ,
ಪಾಹಿ ಅಂಜನ–ಸರ್ಷಪನೆ–ಖರ್ಪಟ:–ಶ್ರದ್ಧಾಹ್ವ ॥ ೨೩ ॥

ಪಾಹಿ ಸಂಧ್ಯಾತ–ವಿಜ್ಞಾನನೆ, ಪಾಹಿ ಮಹ ವಿಜ್ಞಾನ–ಕೀರ್ತನೆ,
ಪಾಹಿ ಸಂಕೀರ್ಣಾಖ್ಯ–ಕತ್ಥನೆ–ಮಹಾಬುದ್ಧಿ–ಜಯಾ,
ಪಾಹಿ ಮಾಹತ್ತರ–ಸುವೀರ್ಯನೆ, ಪಾಹಿ ಮಾಂ ಮೇಧಾವಿ, ಜಯ ಅಜಯ,
ಪಾಹಿ ಮಾಂ ರಂತಿಮ್ನ–ಮನು, ಮಾಂ ಪಾಹಿ ಮಾಂ ಪಾಹಿ ॥ ೨೪ ॥

ಪಾಹಿ ಮೋದ–ಪ್ರಮೋದ–ಸಂತಸ, ಪಾಹಿ ಆನಂದ–ಸಂತುಷ್ಟನೆ,
ಪಾಹಿ ಮಾಂ ಚಾರ್ವ ಅಂಗ–ಚಾರು ಸುಬಾಹು–ಚಾರು ಪದ,
ಪಾಹಿ ಪಾಹಿ ಸುಲೋಚನನೆ, ಮಾಂ ಪಾಹಿ ಸಾರಸ್ವತ–ಸುವೀರನೆ,
ಪಾಹಿ ಪ್ರಾಜ್ಞ–ಕಪಿ– ಅಲಂಪಟ, ಪಾಹಿ ಸರ್ವಜ್ಞ ॥ ೨೫ ॥

ಪಾಹಿ ಮಾಂ ಸರ್ವಜಿನ್–ಮಿತ್ರನೆ, ಪಾಹಿ ಪಾಪ ವಿನಾಶಕನೆ,
ಮಾಂ ಪಾಹಿ ಧರ್ಮವಿನೇತ–ಶಾರದ ಓಜ–ಸುತಪಸ್ವೀ,
ಪಾಹಿ ಮಾಂ ತೇಜಸ್ವಿ, ನಮೋ ಮಾಂ ಪಾಹಿ ದಾನ–ಸುಶೀಲ,
ನಮೋ ಮಾಂ ಪಾಹಿ ಯಜ್ಞ–ಸುಕರ್ತ–ಯಜ್ವೀ–ಯಾಗ ವರ್ತಕನೆ ॥ ೨೬ ॥

ಪಾಹಿ ಪ್ರಾಣ–ತ್ರಾಣ–ಅಮಋಷಿ, ಪಾಹಿ ಮಾಂ ಉಪದೇಷ್ಟ–ತಾರಕ,
ಪಾಹಿ ಕಾಲ–ಕ್ರೀಡನ–ಸುಕರ್ತಾ–ಸುಕಾಲಜ್ಞ,
ಪಾಹಿ ಕಾಲ ಸುಸೂಚಕನೆ, ಮಾಂ ಪಾಹಿ ಕಲಿ ಸಂಹರ್ತ–ಕಲಿ,
ಮಾಂ ಪಾಹಿ ಕಾಲಿ–ಶಾಮರೇತ–ಸದಾರತ–ಸುಬಲನೆ ॥ ೨೭ ॥

ಪಾಹಿ ಪಾಹಿ ಸಹೋ–ಸದಾಕಪಿ, ಪಾಹಿ ಗಮ್ಯ–ಜ್ಞಾನ–ದಶಕಲ ।
ಪಾಹಿ ಮಾಂ ಶ್ರೋತವ್ಯ ನಮೋ, ಸಂಕೀರ್ತಿತವ್ಯ ನಮೋ,
ಪಾಹಿ ಮಾಂ ಮಂತವ್ಯ–ಕವ್ಯನೆ, ಪಾಹಿ ದ್ರಷ್ಟವ್ಯನೆ–ಸರವ್ಯನೆ,
ಪಾಹಿ ಮಾಂ ಗಂತವ್ಯ, ನಮೋ ಕ್ರವ್ಯನೆ, ಪಾಹಿ ಸ್ಮರ್ತವ್ಯ ॥ ೨೮ ॥

ಪಾಹಿ ಸೇವ್ಯ–ಸುಭವ್ಯ ನಮೋ, ಮಾಂ ಪಾಹಿ ಸ್ವರ್ಗವ್ಯ, ನಮೋ ಭಾವ್ಯನೆ,
ಪಾಹಿ ಮಾಂ ಜ್ಞಾತವ್ಯ ನಮೋ, ವಕ್ತವ್ಯ–ಗವ್ಯ ನಮೋ,
ಪಾಹಿ ಮಾಂ ಲಾತವ್ಯ–ವಾಯುವೆ, ಪಾಹಿ ಬ್ರಹ್ಮ ಬ್ರಾಹ್ಮಣ ಪ್ರಿಯ,
ಪಾಹಿ ಪಾಹಿ ಸರಸ್ವತೀ–ಪತೇ ಜಗದ್–ಗುರುವರ್ಯ ॥ ೨೯ ॥

ವಾಮನ ಪುರಾಣದಲಿ ಪೇಳಿದ ಈ ಮಹಾತ್ಮರ ಪರಮ ಮಂಗಳ ನಾಮಗಳ,
ಸಂಪ್ರೀತಿ ಪೂರ್ವಕ ನಿತ್ಯ ಸ್ಮರಿಸುವವರಾ–
ಶ್ರೀಮನೋರಮ ಅವರು ಬೇಡಿದ ಕಾಮಿತಾರ್ಥಗಳಿತ್ತು,
ತನ್ನ ತ್ರಿಧಾಮದೊಳಗನುದಿನದಲಿಟ್ಟಾನಂದ ಬಡಿಸುವನು ॥ ೩೦ ॥

ಈ ಸಮೀರಗೆ ನೂರು ಜನ್ಮ ಮಹಾ ಸುಖ ಪ್ರಾರಬ್ಧ ಭೋಗ,
ಪ್ರಯಾಸವಿಲ್ಲದೆ ಐದಿದನು ಲೋಕಾಧಿಪತ್ಯವನು,
ಭೂಸುರನ ಒಪ್ಪಿಡಿ ಅವಲಿಗೆ ವಿಶೇಷ ಸೌಖ್ಯವನಿತ್ತದಾತನ ದಾಸವರ್ಯನು,
ಲೋಕಪತಿಯೆನಿಸುವದು ಅಚ್ಚರವೆ ॥ ೩೧ ॥

ದ್ವಿಶತ ಕಲ್ಪಗಳಲ್ಲಿ ಬಿಡದೀ ಪೆಸರಿನಿಂದಲಿ ಕರೆಸಿದನು,
ತನ್ನೊಶಗ ಅಮರರೊಳಿದ್ದು ಮಾಡುವನವರ ಸಾಧನವ,
ಅಸದುಪಾಸನೆ ಗೈವ ಕಲ್ಯಾದ್ಯಸುರಪರ ಸಂಹರಿಸಿ,
ತಾ ಪೊಂಬಸಿರ ಪದ ವೈದಿದನು ಗುರು ಪವಮಾನ ಸತಿಯೊಡನೆ ॥ ೩೨ ॥

ಅನಿಮಿಷರ ನಾಮದಲಿ ಕರೆಸುವ ಅನಿಲದೇವನು–
ಒಂದು ಕಲ್ಪಕೆ ವನಜ ಸಂಭವನೆನಿಸಿ ಎಂಭತ್ತೇಳುವರೆ ವರುಷ,
ಗುಣತ್ರಯ ವರ್ಜಿತನ ಮಂಗಳ ಗುಣಕ್ರಿಯ ಸುರೂಪಂಗಳುಪಾಸನವು–
ಅವ್ಯಕ್ತಾ್ಯದಿ ಪೃಥ್ವ್ಯಂತರದಿ ಇರುತಿಹುದು ॥ ೩೩ ॥

ಮಹಿತ ಋಜುಗಣಕೊಂದೆ ಪರಮೋತ್ಸಹ ವಿವರ್ಜಿತವೆಂಬ ದೋಷವು ವಿಹಿತವೇ ಸರಿ,
ಇದನು ಪೇಳ್ದರೆ ಮುಕ್ತ ಬ್ರಹ್ಮರಿಗೆ ಬಹುದುಸಾಮ್ಯವು,
ಜ್ಞಾನ ಭಕುತಿಯು ದ್ರುಹಿಣ ಪದ ಪರಿಯಂತ ವೃದ್ಧಿಯು,
ಬಹಿರುಪಾಸನೆ ಉಂಟನಂತರ ಬಿಂಬದರ್ಶನವು ॥ ೩೪ ॥

ಜ್ಞಾನರಹಿತ ಭಯತ್ವ ಪೇಳ್ವ ಪುರಾಣ ದೈತ್ಯರ ಮೋಹಕವು,
ಚತುರಾನನಗೆ ಕೂಡುವದೆ ಮೋಹ ಅಜ್ಞಾನ ಭಯಶೋಕ,
ಭಾನುಮಂಡಲ ಚಲಿಸಿದಂದದಿ ಕಾಣುವುದು ದೃಗ್ದೋಷದಿಂದಲಿ,
ಶ್ರೀನಿವಾಸನ ಪ್ರೀತಿಗೋಸುಗ ತೋರ್ದನಲ್ಲದಲೆ ॥ ೩೫ ॥

ಕಮಲಸಂಭವ ಸರ್ವರೊಳಗುತ್ತಮನೆನಿಸುವನು ಎಲ್ಲ ಕಾಲದಿ–
ವಿಮಲಭಕ್ತಿ ಜ್ಞಾನ ವೈರಾಗ್ಯಾದಿ ಗುಣದಿಂದ,।
ಸಮಭ್ಯಧಿಕ ವಿವರ್ಜಿತನ ಗುಣ, ರಮೆಯ ಮುಖದಿಂದರಿತು ನಿತ್ಯದಿ,
ದ್ಯುಮಣಿ ಕೋಟಿಗಳಂತೆ ಕಾಂಬನು ಬಿಂಬರೂಪವನು ॥ ೩೬ ॥

ಜ್ಞಾನ ಭಕ್ತ್ಯಾದ್ಯಖಿಳ ಗುಣ ಚತುರಾನನೊಳಗಿಪ್ಪಂತೆ–
ಮುಖ್ಯ ಪ್ರಾಣನಲಿ ಚಿಂತಿಪುದು ಯತ್ಕಿಂಚಿತ್ಕೊರತೆಯಾಗಿ,
ನ್ಯೂನ ಋಜುಗಣ ಜೀವರಲ್ಲಿ ಕ್ರಮೇಣ ವೃದ್ಧಿ ಜ್ಞಾನಭಕ್ತಿ,
ಸಮಾನ ಭಾರತಿ ವಾಣಿಗಳಲಿ ಪದ ಪ್ರಯುಕ್ತಧಿಕ ॥ ೩೭ ॥

ಸೌರಿ ಸೂರ್ಯನ ತೆರದಿ ಬ್ರಹ್ಮ ಸಮೀರ ಗಾಯತ್ರೀ ಗಿರಿಗಳೊಳು–
ತೋರುವುದು ಅಸ್ಪಷ್ಟರೂಪದಿ ಮುಕ್ತಿ ಪರಿಯಂತ,
ವಾರಿಜಾಸನ ವಾಯು ವಾಣೀ ಭಾರತಿಗಳಿಗೆ ಮಹಾ ಪ್ರಳಯದಿ–
ಬಾರದಜ್ಞಾನಾದಿ ದೋಷವು ಹರಿಕೃಪಾಬಲದಿ ॥ ೩೮ ॥

ನೂರು ವರುಷಾನಂತರದಲಿ ಸರೋರುಹಾಸನ ತನ್ನ ಕಲ್ಪದಲಾರು ಮುಕ್ತಿಯ ನೈದುವರೊ,
ಅವರವರ ಕರೆದೊಯ್ದು ಶೌರಿ ಪುರುದೊಳಗಿಪ್ಪ ನದಿಯಲಿ–
ಕಾರುಣಿಕ ಸುಸ್ನಾನ ನಿಜಪರಿವಾರ ಸಹಿತದಿ ಮಾಡಿ,
ಹರಿ ಉದರ ಪ್ರವೇಶಿಸುವ ॥ ೩೯ ॥

ವಾಸುದೇವನ ಉದರದಲಿ ಪ್ರವೇಶಗೈದಾನಂತರದಿ–
ನಿರ್ದೋಷ ಮುಕ್ತರು ಉದರದಿಂ ಪೊರಮಟ್ಟು ಹರುಷದಲಿ,
ಮೇಶನಿಂದಾಜ್ಞವ ಪಡೆದನಂತಾಸನ ಸೀತದ್ವೀಪ ಮೋಕ್ಷದಿ–
ವಾಸವಾಗಿ ವಿಮುಕ್ತ ದು:ಖರು ಸಂಚರಿಸುತಿಹರು ॥ ೪೦ ॥

ಸತ್ವ ಸತ್ವ ಮಹಾಸುಸೂಕ್ಷವು, ಸತ್ವ ಸತ್ವಾತ್ಮಕ ಕಳೇವರ,
ಸತ್ಯ ಲೋಕಾಧಿಪನೆನಿಪಗತ್ಯಲ್ಪ ವೆರಡುಗುಣ,
ಮುಕ್ತ ಭೋಗ್ಯವಿದಲ್ಲ, ಅಜಾಂಡೋತ್ಪತ್ತಿ ಕಾರಣವಲ್ಲ,
ಹರಿಪ್ರೀತ್ಯರ್ಥವಾಗೀ ಜಗದ ವ್ಯಾಪಾರಗಳ ಮಾಡುವನು ॥ ೪೧ ॥

ಪಾದನ್ಯೂನ ಶತಾಬ್ದ ಪರಿಯಂತೋದಿ ಉಗ್ರತಪಾಹ್ವಯದಿ–
ಲವಣೋದಧಿಯೊಳಗೆ ಕಲ್ಪದಶ ತಪವಿದ್ದನಂತರದಿ–
ಸಾಧಿಸಿದ ಮಹದೇವ ಪದವ, ಆರ್‍ೈದುನವ ಕಲ್ಪಾವಸಾನಕೆ–
ಐದುವನು ಶೇಷನ ಪದವ ಪಾರ್ವತಿಸಹಿತನಾಗಿ ॥ ೪೨ ॥

ಇಂದ್ರಮನು ದಶಕಲ್ಪಗಳಲಿ ಸುನಂದನಾಮದಿ ಶ್ರವಣಗೈದು,
ಮುಕುಂದನಪರೋಕ್ಷಾರ್ಥ ನಾಲ್ಕು ಸುಕಲ್ಪ ತಪವಿದ್ದು,
ನೊಂದು ಪೊಗೆಯೊಳು ಕೋಟಿ ವರುಷ, ಪುರಂದರರನು ಅದನುಂಡನಂತರ,
ಪೊಂದಿದನು ನಿಜಲೋಕ ಸುರಪತಿ ಕಾಮನಿದರಂತೆ ॥ ೪೩ ॥

ಕರೆಸುವರು ಪೂರ್ವದಲಿ ಚಂದ್ರಾರ್ಕರು, ಅತಿ ಶಾಂತ ಸುರೂಪ ನಾಮದಿ,
ಎರಡೆರಡು ಮನುಕಲ್ಪ ಶ್ರವಣಗೈದು,
ಮನುಕಲ್ಪ ವರ ತಪೋಬಲದಿಂದ, ಅರ್ವಾಕ್ ಶಿರಗಳಾಗೀರ್‍ೈದು ಸಾವಿರ ವರುಷ,
ದು:ಖವ ನೀಗಿ ಕಾಂಬರು ಬಿಂಬರೂಪವನು ॥ ೪೪ ॥

ಸಾಧನಗಳಪರೋಕ್ಷನಂತರ ಐದುವರು ಮೋಕ್ಷವನು–
ಶಿವ ಶಕ್ರಾದಿ ದಿವಿಜರು ಉಕ್ತಕ್ರಮದಿಂ ಕಲ್ಪ ಸಂಖ್ಯೆಯಲಿ,
ಐದಲೆಗೆ ಐವತ್ತು, ಉಪೇಂದ್ರ ಸಹೋದರರನಿಗಿಪ್ಪತ್ತು, ದ್ವಿನವ ತ್ವಗಾಧಿಪತಿ ಪ್ರಾಣನಿಗೆ,
ಗುರು ಮನುಗಳಿಗೆ ಷೋಡಶವು ॥ ೪೫ ॥

ಪ್ರವಹ ಮರುತಗೆ ಹನ್ನೆರಡು, ಸೈಂಧವ ದಿವಾಕರ ಧರ್ಮರಿಗೆ ದಶ,
ನವ ಸುಕಲ್ಪವು ಮಿತ್ರರಿಗೆ, ಶೇಷಶತ ಜನರಿಗೆಂಟು,
ಕವಿ ಸನಕ ಸುಸನಂದನ ಸನತ್ಕುವರ ಮುನಿಗಳಿಗೇಳು,
ವರುಣನ ಯುವತಿ ಪರ್ಜನ್ಯಾದಿ ಪುಷ್ಕರಗಾರು ಕಲ್ಪದಲಿ ॥ ೪೬ ॥

ಐದು ಕರ್ಮಜ ಸುರರಿಗೆ, ಆಜಾನಾದಿಗಳಿಗೆರಡೆರಡು ಕಲ್ಪ,
ಅರ್ಧಾಧಿಕತ್ರಯ ಗೋಪಿಕಾಸ್ತ್ರೀಯರಿಗೆ, ಪಿತೃತ್ರಯವು,
ಈ ದಿವೌಕಸ ಮನುಜಗಾಯಕರ್‍ೈದುವರು ಎರಡು–ಒಂದು ಕಲ್ಪ,
ನರಾಧಿಪರಿಗರೆ ಕಲ್ಪದೊಳಗಪರೋಕ್ಷವಿರುತಿಹುದು ॥ ೪೭ ॥

ದೀಪಗಳನುಸರಿಸಿ ದೀಪ್ತಿಯು ವ್ಯಾಪಿಸಿ ಮಹಾತಿಮಿರ ಕಳೆದು–
ಪರೋಪಕಾರವ ಮಾಳ್ಪ ತೆರದಂದದಲಿ,
ಪರಮಾತ್ಮ ಆ ಪಯೋಜಾಸನನೊಳಗಿದ್ದು ಸ್ವರೂಪ ಶಕ್ತಿಯ ವ್ಯಕ್ತಿಗೈಸುತ,
ತಾ ಪೊಳೆವನವರಂತೆ ಚೇಷ್ಟೆಯ ಮಾಡಿ ಮಾಡಿಸುತ ॥ ೪೮ ॥

ಸ್ವೋದರಸ್ಥಿತ ಪ್ರಾಣ ರುದ್ರೇಂದ್ರಾದಿ ಸುರರಿಗೆ ದೇಹಗಳ ಕೊಟ್ಟು,
ಆದರದಿ ಅವರವರ ಸೇವೆಯ ಕೊಂಬನನವರತ,
ಮೋದ ಬೋಧ ದಯಾಬ್ಧಿ ತನ್ನವರಾಧಿರೋಗವ ಕಳೆದು,
ಮಹದಪರಾಧಗಳ ನೋಡದಲೆ ಸಲಹುವ ಸತತ ಸ್ಮರಿಸುವರ ॥ ೪೯ ॥

ಪ್ರತಿ ಪ್ರತೀ ಕಲ್ಪದಲಿ ಸೃಷ್ಟಿ ಸ್ಥಿತಿ ಲಯವ ಮಾಡುತಲೆ ಮೋದಿಪ,
ಚತುರ ಮುಖ ಪವಮಾನರನ್ನವ ಮಾಡಿ ಭುಂಜಿಸುವ,
ಘೃತವೆ ಮೃತ್ಯುಂಜಯುನೆನಿಪ, ದೇವತೆಗಳೆಲ್ಲುಪಸೇಚನರು,
ಶ್ರೀಪತಿಗೆ ಮೂರ್ಜಗವೆಲ್ಲ ಓದನತಿಥಿಯೆನಿಸಿಕೊಂಬ ॥ ೫೦ ॥

ಗರ್ಭಿಣೀ ಸ್ತ್ರೀ ಉಂಡ ಭೋಜನ ಗರ್ಭಗತ ಶಿಶು ಉಂಬ ತೆರದಲಿ,
ನಿರ್ಭಯನು ತಾನುಂಡುಣಿಸುವನು ಸರ್ವ ಜೀವರಿಗೆ,
ನಿರ್ಬಲತಿ ಪರಮಾಣು ಜೀವಗೆ ಅಬ್ಬುವದೇ ಸ್ಥೂಲಾನ್ನ ಭೋಜನ,
ಅರ್ಭಕರು ಪೇಳುವರು ಕೋವಿದರಿದನೊಡಂಬಡರು ॥ ೫೧ ॥

ಅಪಚಯಗಳಿಲ್ಲ ಉಂಡುದುದರಿಂದ ಉಪಚಯಗಳಿಲ್ಲ,
ಅಮರಗಣದೊಳಗುಪಮರೆನಿಸುವರಿಲ್ಲ ಜನ್ಮಾದಿಗಳು ಮೊದಲಿಲ್ಲ,
ಅಪರಿಮಿತ ಸನ್ಮಹಿಮ ಭಕ್ತರ ಅಪುನರಾವರ್ತರನು ಮಾಡುವ,
ಕೃಪಣವತ್ಸಲ ಸ್ವಪದ ಸೌಖ್ಯವನಿತ್ತು ಶರಣರಿಗೆ ॥ ೫೨ ॥

ಬಿತ್ತಿ ಬೀಜವು ಭೂಮಿಯೊಳು ನೀರೆತ್ತಿ ಬೆಳಸಿದ ಬೆಳಸು ಪ್ರಾಂತಕೆ ಕಿತ್ತಿ ಮೆಲುವಂದದಲಿ,
ಲಕ್ಷ್ಮೀರಮಣ ಲೋಕಗಳ ಮತ್ತೆ ಜೀವರ ಕರ್ಮ-
ಕಾಲೋತ್ಪತ್ತಿ ಸ್ಥಿತಿಲಯ ಮಾಡುತಲಿ,
ಸಮವರ್ತಿಯೆನಿಸುವ ಖೇದ ಮೋದಗಳಿಲ್ಲ ಅನವರತ ॥ ೫೩ ॥

ಶ್ವಸನ ರುದ್ರೇಂದ್ರ ಪ್ರಮುಖ ಸುಮನಸರೊಳಿದ್ದರು ಕ್ಷುತ್ಪಿಪಾಸಗಳು-
ಒಶದೊಳಿಪ್ಪವು ಸಕಲ ಭೋಗಕೆ ಸಾಧನಗಳಾಗಿ,
ಅಸುರ ಪ್ರೇತ ಪಿಶಾಚಿಗಳ ಭಾಧಿಸುತಲಿಪ್ಪವು ದಿನದಿನದಿ,
ಮಾನಿಸರೊಳಗೆ ಮೃಗ ಪಕ್ಷಿ ಜೀವರೊಳಿದ್ದು ಪೋಗುವವು ॥ ೫೪ ॥

ವಾಸುದೇವಗೆ ಸ್ವಪ್ನ ಸುಪ್ತಿ ಪಿಪಾಸ ಕ್ಷುದ್ಭಯ ಶೋಕ ಮೋಹಾಯಾಸ-
ಅಪಸ್ಮೃತಿ ಮಾತ್ಸರ್ಯ ಮದ ಪುಣ್ಯ ಪಾಪಾದಿ ದೋಷ ವರ್ಜಿತನೆಂದು,
ಬ್ರಹ್ಮ ಸದಾಶಿವಾದಿ ಸಮಸ್ತ ದಿವಿಜರು,
ಉಪಾಸನೆಯ ಗೈದೆಲ್ಲ ಕಾಲದಿ ಮುಕ್ತರಾಗಿಹರು ॥ ೫೫ ॥

ಪರಮ ಸೂಕ್ಷ್ಮ ಕ್ಷಣವು, ಐದು ತ್ರುಟಿ, ಕರೆಸುವದು ಐವತ್ತು ತ್ರುಟಿ ಲವ,
ಎರಡು ಲವವು ನಿಮಿಷ, ನಿಮಿಷಗಳು ಎಂಟು ಮಾತ್ರ,
ಯುಗ ಗುರು, ದಶ ಪ್ರಾಣರು, ಪಳ ಹನ್ನೆರಡು ಬಾಣವು,
ಘಟಿಕ ತ್ರಿಂಶತಿ ಇರುಳು–ಹಗಲು, ಅರವತ್ತು ಘಟಿಕಗಳು ಅಹೋರಾತ್ರಿಗಳು ॥ ೫೬ ॥

ಈ ದಿವಾ–ರಾತ್ರಿಗಳು ಎರಡು ಹದಿನೈದು ಪಕ್ಷಗಳು,
ಎರಡು ಮಾಸಗಳು ಆದಪವು, ಮಾಸ ದ್ವಯವೆ ಋತು, ಋತು ತ್ರಯಗಳು ಅಯನ,
ಐದುವದು ಅಯನ ದ್ವಯಾಬ್ದ, ಕೃತಾದಿ ಯುಗಗಳು,
ದೇವ ಮಾನದಿ ದ್ವಾದಶ ಸಹಸ್ರ ವರುಷಗಳು ಅದನು ಪೇಳುವೆನು ॥ ೫೭ ॥

ಚತುರ ಸಾವಿರದ ಎಂಟು ನೂರಿವು ಕೃತ ಯುಗಕೆ,
ತ್ರಿ ಸಹಸ್ರ ಸಲೆ ಷಟ್ ಶತವು ತ್ರೇತಗೆ, ದ್ವಾಪರಕೆ ದ್ವಿ ಸಹಸ್ರ ನಾನೂರು,
ದಿತಿ–ಜ–ಪತಿ ಕಲಿ ಯುಗಕೆ ಸಾವಿರ ಶತ ದ್ವಯಗಳು ಕೂಡಿ–
ಈ ದೇವತೆಗಳಿಗೆ ಹನ್ನೆರಡು ಸಾವಿರ ವಿಹವು ವರುಷಗಳು ॥ ೫೮ ॥

ಪ್ರಥಮ ಯುಗಕೇಳಧಿಕ ಅರೆ ವಿಂಶತಿ ಸುಲಕ್ಷಾಷ್ಟೋತ್ತರ–
ಸುವಿಂಶತಿ ಸಹಸ್ರ ಮನುಷ್ಯ ಮಾನಾಬ್ದಗಳು,
ಷಣ್ಣವತಿ ಮಿತ ಸಹಸ್ರದ ಲಕ್ಷ ದ್ವಾದಶ ದ್ವಿತಿಯ,
ತೃತಿಯಕೆ ಎಂಟು ಲಕ್ಷದ ಚತುರಷಷ್ಠಿ ಸಹಸ್ರ, ಕಲಿಗಿದರರ್ಧ ಚಿಂತಿಪುದು ॥ ೫೯ ॥

ಮೂರಧಿಕ ನಾಲ್ವತ್ತು ಲಕ್ಷದಆರು ಮೂರೆರಡಧಿಕ ಸಾವಿರ ಈರೆರಡು ಯುಗವರುಷ–
ಸಂಖ್ಯೆ ಗೈಯಲೆನಿತಿಹುದೊ,
ಸೂರಿ ಪೆಚ್ಚಿಸೆ ಸಾವಿರದನಾನೂರು ಮೂವತ್ತೆರಡು ಕೋಟಿ,
ಸರೋರುಹಾಸನಗಿದು ದಿವಸವೆಂಬರು ವಿಪಶ್ಚಿತರು ॥ ೬೦ ॥

ಶತಧೃತಿಗೆ ಈ ದಿವಸಗಳು ತ್ರಿಂಶತಿಯು ಮಾಸ, ದ್ವಾದಶಾಬ್ದವು,
ಶತವೆರಡರೊಳು ಸರ್ವ ಜೀವೋತ್ಪತ್ತಿ ಸ್ಥಿತಿಲಯವು,
ಶ್ರುತಿ ಸ್ಮೃತಿಗಳು ಪೇಳುತಿಹವು ಅಚ್ಯುತಗೆ ನಿಮಿಷವಿದೆಂದು,
ಸುಖ ಶಾಶ್ವತಗೆ ಪಾಸಟಿಯೆಂಬುವರೆ ಬ್ರಹ್ಮಾದಿ ದಿವಿಜರನು ॥ ೬೧ ॥

ಆದಿ ಮಧ್ಯಾಂತಗಳು ಇಲ್ಲದ ಮಾಧವಗಿದುಪಚಾರವೆಂದು ಋಗಾದಿ ವೇದ ಪುರಾಣಗಳು–
ಪೇಳುವವು ನಿತ್ಯದಲಿ,
ಮೋದಮಯನ ಅನುಗ್ರಹವ ಸಂಪಾದಿಸಿ ರಮಾ ಬ್ರಹ್ಮ ರುದ್ರೇಂದ್ರಾದಿಗಳು,
ತಮ್ಮ ತಮ್ಮ ಪದವಿಯನೈದಿ ಸುಖಿಸುವರು ॥ ೬೨ ॥

ಈ ಕಥಾಮೃತ ಪಾನಸುಖ ಸುವಿವೇಕಿಗಳಿಗಲ್ಲದಲೆ,
ವೈಷಿಕ ವ್ಯಾಕುಲ ಕುಚಿತ್ತರಿಗೆ ದೊರೆವುದೆ ಆವಕಾಲದಲಿ,
ಲೋಕವಾರ್ತೆಯ ಬಿಟ್ಟು ಇದನವಲೋಕಿಸುತ ಮೋದಿಪರಿಗೊಲಿದು,
ಕೃಪಾಕರ ಜಗನ್ನಾಥ ವಿಠಲ ಪೊರೆವನನುದಿನದಿ ॥ ೬೩ ॥

॥ ಇತಿ ಶ್ರೀ ಕಲ್ಪಸಾಧನ ಸಂಧಿ ಸಂಪೂರ್ಣಂ ॥
॥ ಇತಿ ಶ್ರೀ ಅಪರೋಕ್ಷ ತಾರತಮ್ಯ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

॥ ೨೫. ಶ್ರೀ ಕ್ರೀಡಾವಿಲಾಸ ಸಂಧಿ ॥
॥ ೨೫. ಶ್ರೀ ಸರ್ವ ಸ್ವಾತಂತ್ರ್ಯ ಸಂಧಿ ॥

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ,
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥

ಶ್ರೀನಿವಾಸನ ಚರಿತೆಗಳ ಪರಮಾನುರಾಗದಿ ಬೆಸೆಗೊಳಲು-
ಮುನಿಶೌನಕಾದ್ಯರಿಗರುಪಿದನು ಸೂತಾರ್ಯ ದಯದಿಂದ ॥

ಪಚನ ಭಕ್ಷಣ ಗಮನ ಭೋಜನ ವಚನ ಮೈಥುನ ಶಯನ ವೀಕ್ಷಣ-
ಅಚಲನ ಚಲನ ಪ್ರಯತ್ನದಿ ಸಾಧ್ಯವೇ ಜನಕೆ?
ಶುಚಿಸದನ ದಯದಿಂದ ಜೀವರ ನಿಚಯದೊಳು ತಾನಿಂತು ಮಾಡುವ,
ಉಚಿತಾನುಚಿತ ಕರ್ಮಗಳನೆಂದರಿದು ಕೊಂಡಾಡು ॥ ೧ ॥

ವಿಷ್ಟರಶ್ರವ ದೇಹದೊಳಗೆ ಪ್ರವಿಷ್ಟನಾಗಿ ನಿರಂತರದಿ-
ಬಹುಚೇಷ್ಟೆಗಳ ಮಾಡುತಿರೆ ಕಂಡು ಸಜೀವಿಯೆನುತಿಹರು,
ಹೃಷ್ಟರಾಗುವರವನ ನೋಡಿ ಕನಿಷ್ಠರೆಲ್ಲರು ಸೇವೆ ಮಾಳ್ಪರು,
ಬಿಟ್ಟಕ್ಷಣದಲಿ ಕುಣಪಸಮವೆಂದರಿದು ಅದನುಪೇಕ್ಷಿಪರು ॥ ೨ ॥

ಕ್ರೀಡೆಗೋಸುಗ ಅವರವರ ಗತಿನೀಡಲೋಸುಗ ದೇಹಗಳ ಕೊಟ್ಟಾಡುವನು ಸ್ವೇಚ್ಛೆಯಲಿ-
ಬ್ರಹ್ಮೇಶಾದ್ಯರೊಳು ಪೊಕ್ಕು,
ಮಾಡುವನು ವ್ಯಾಪಾರ ಬಹು ವಿಧ ಮೂಢ ದೈತ್ಯರೊಳಿದ್ದು ಪ್ರತಿದಿನ,
ಕೇಡು ಲಾಭಗಳಿಲ್ಲವಿದರಿಂದಾವ ಕಾಲದಲಿ ॥ ೩ ॥

ಅಕ್ಷರೇಢ್ಯನು ಬ್ರಹ್ಮವಾಯುತ್ರ್ಯಕ್ಷಸುರಪ ಸುರಾಸುರರೊಳು,
ಅಧ್ಯಕ್ಷನಾಗಿದ್ದೆಲ್ಲರೊಳು ವ್ಯಾಪಾರ ಮಾಡುತಿಹ,
ಅಕ್ಷಯನು ಸತ್ಯಾತ್ಮಕ ಪರಾಪೇಕ್ಷೆಯಿಲ್ಲದೆ ಸರ್ವರೊಳಗೆ-
ವಿಲಕ್ಷಣನು ತಾನಾಗಿ ಲೋಕವ ರಕ್ಷಿಸುತಲಿಪ್ಪ ॥ ೪ ॥

ಶ್ರೀ ಸರಸ್ವತಿ ಭಾರತೀ ಗಿರಿಜಾ ಶಚೀ ರತಿ ರೋಹಿಣೀ-
ಸಂಜ್ಞಾ ಶತ ಸುರೂಪಾದ್ಯಖಿಳ ಸ್ತ್ರೀಯರೊಳು ಸ್ತ್ರೀರೂಪ,
ವಾಸವಾಗಿದ್ದೆಲ್ಲರಿಗೆ ವಿಶ್ವಾಸ ತನ್ನಲಿ ಕೊಡುವ,
ಅವರಭಿಲಾಷೆಗಳ ಪೂರೈಸುತಿಪ್ಪನು ಯೋಗ್ಯತೆಗಳರಿತು ॥ ೫ ॥

ಕೋಲು ಕುದುರೆಯ ಮಾಡಿ ಆಡುವ ಬಾಲಕರ ತೆರದಂತೆ-
ಲಕ್ಷ್ಮೀಲೋಲ ಸ್ವಾತಂತ್ರ್ಯ ಗುಣವ ಬ್ರಹ್ಮಾದ್ಯರೊಳಗಿಟ್ಟು ಲೀಲೆಗೈವನು,
ತನ್ನವರಿಗನುಕೂಲನಾಗಿದ್ದೆಲ್ಲ ಕಾಲದಿ-
ಖುಲ್ಲರಿಗೆ ಪ್ರತಿಕೂಲನಾಗಿಹ ಪ್ರಕಟನಾಗದಲೆ ॥ ೬ ॥

ಸೌಪರಣಿ ವರವಹನ ನಾನಾ ರೂಪನಾಮದಿ ಕರೆಸುತವರ-
ಸಮೀಪದಲ್ಲಿದ್ದಖಿಳ ವ್ಯಾಪಾರಗಳ ಮಾಡುವನು,
ಪಾಪ ಪುಣ್ಯಗಳೆರಡು ಅವರ ಸ್ವರೂಪಗಳನುಸರಿಸಿ ಉಣಿಪ,
ಪರೋಪಕಾರಿ ಪರೇಶ ಪೂರ್ಣಾನಂದ ಜ್ಞಾನಘನ ॥ ೭ ॥

ಅಹರ ನಿದ್ರಾ ಮೈಥುನಗಳಹರಹರ ಬಯಸಿ ಬಳಲುವ,
ಲಕ್ಷ್ಮೀ ಮಹಿತನ ಮಹಾಮಹಿಮೆಗಳ ನೆಂತರಿವ ನಿತ್ಯದಲಿ?
ಅಹಿಕ ಸೌಖ್ಯವ ಮರೆದು ಮನದಲಿ ಗ್ರಹಿಸಿ ಶಾಸ್ತ್ರಾರ್ಥಗಳ-
ಪರವೋತ್ಸಹದಿ ಕೊಂಡಾಡುತಲೆ ಮೈಮರೆದವರಿಗಲ್ಲದಲೆ ॥ ೮ ॥

ಬಂಧ ಮೋಕ್ಷ ಪ್ರದನ ಜ್ಞಾನವು ಮಂದಮತಿಗಳಿಗೆಂತು ದೊರೆವುದು,
ಬಿಂದುಮಾತ್ರ ಸುಖಾನುಭವ ಪರ್ವತಕೆ ಸಮ ದು:ಖ ವೆಂದು ತಿಳಿಯದೆ,
ಅನ್ಯ ದೈವಗಳಿಂದ ಸುಖವಾಪೇಕ್ಷಿಸುವರು,
ಮುಕುಂದನಾರಾಧನೆಯ ಬಿಟ್ಟವಗುಂಟೆ ಮುಕ್ತಿ ಸುಖ ॥ ೯ ॥

ರಾಜ ತನ್ನಾಮಾತ್ಯ ಕರುಣದಿ ನೈಜ ಜನರಿಗೆ ಕೊಟ್ಟು-
ಕಾರ್ಯ ನಿಯೋಜಿಸುತ ಮಾನಾಪಮಾನವ ಮಾಳ್ಪ ತೆರದಂತೆ,
ಶ್ರೀಜನಾರ್ದನ ಸರ್ವರೊಳಗಪರಾಜಿತನು ತಾನಾಗಿ,
ಸರ್ವ ಪ್ರಯೋಜನವ ಮಾಡಿಸುತ ಮಾಡುವ ಫಲಕೆ ಗುರಿಮಾಡಿ ॥ ೧೦ ॥

ವಾಸುದೇವ ಸ್ವತಂತ್ರವ ಸರೋಜಾಸನಾದ್ಯಮರಾ ಸುರರಿಗೀಯಲೋಸುಗ,
ಅರ್ಥವ ತೆಗದದರೊಳರ್ಥವ ಚತುರ್ಭಾಗ ಗೈಸಿ,
ವಂದನು ಶತವಿಧ, ದ್ವಿಪಂಚಾಶತಾಬ್ಜ ಜಗೆ,
ಅಷ್ಟ ಚತ್ವಾರಿಂಶದನಿಲನಿಗಿತ್ತ, ವಾಣೀ ಭಾರತೀಗರ್ಧ ॥ ೧೧ ॥

ದ್ವಿತಿಯಪಾದವ ತೆಗೆದು ಕೊಂಡದಶತ ವಿಭಾಗವ ಮಾಡಿ–
ತಾ ವಿಂಶತಿ ಉಮೇಶನೊಳಿಟ್ಟ ಇಂದ್ರನೊಳೈದಧಿಕ ಹತ್ತು, ರತಿಪನೊಳಗಿನಿತಿಟ್ಟ,
ಅಖಿಳ ದೇವತೆಗಳೊಳಗೀರೈದು,
ಜೀವ ಪ್ರತತಿಯೊಳು ದಶ, ಐದಧಿಕ ನಾಲ್ವತ್ತು ದೈತ್ಯರೊಳು ॥ ೧೨ ॥

ಕಾರುಣಿಕ ಸ್ವಾತಂತ್ರಿಯತ್ವವ ಮೂರುವಿಧ ಗೈಸಿ,
ಎರಡು ತನ್ನೊಳು–ನಾರಿಗೊಂದನು ಕೊಟ್ಟ, ಸ್ವಾತಂತ್ರಿಯವ ಸರ್ವರಿಗೆ,
ಧಾರುಣಿಪ ತನ್ನನುಗರಿಗೆ ವ್ಯಾಪಾರ ಕೊಟ್ಟು,
ಗುಣಾಗುಣಗಳ ವಿಚಾರ ಮಾಡುವ ತೆರದಿ ತ್ರಿಗುಣ ವ್ಯಕ್ತಿಯನೆ ಮಾಳ್ಪ ॥ ೧೩ ॥

ಪುಣ್ಯ ಕರ್ಮಕೆ ಸಹಯವಾಗುವ ಧನ್ಯರಿಗೆ ಕಲ್ಯಾದಿ ದೈತ್ಯರ ಪುಣ್ಯ ಫಲಗಳನೀವ,
ದಿವಿಜರ ಪಾಪಕರ್ಮಫಲ ಅನ್ಯಕರ್ಮವ ಮಾಳ್ಪರಿಗೆ–
ಅನುಗುಣ್ಯಜನರಿಗೆ ಕೊಡುವ,
ಬಹು ಕಾರುಣ್ಯ ಸಾಗರನೀ ತೆರದಿ ಭಕ್ತರನು ಸಂತೈಪ ॥ ೧೪ ॥

ನಿರುಪಮಗೆ ಸರಿಯುಂಟು ಯೆಂದುಚ್ಚರಿಸುವವ,
ತದ್ಭಕ್ತರೊಳು ಮತ್ಸರಿಸುವವ, ಗುಣಗುಣಿಗಳಿಗೆ ಭೇದಗಳ ಪೇಳುವವ,
ದರ ಸುದರಶನ ಊರ್ಧ್ವ ಪುಂಡ್ರವ ಧರಿಸುವರೊಳು ದ್ವೇಷಿಸುವ,
ಹರಿ ಚರಿತೆಗಳ ಕೇಳದಲೆ ಲೋಗರ ವಾರ್ತೆ ಕೇಳುವವ ॥ ೧೫ ॥

ಏವಮಾದೀ ದ್ವೇಷವುಳ್ಳ ಕುಜೀವರೆಲ್ಲರು ದೈತ್ಯರೆಂಬರು,
ಕೋವಿದರ ವಿಜ್ಞಾನ ಕರ್ಮವ ನೋಡಿ ನಿಂದಿಪರು,
ದೇವ ದೇವನ ಬಿಟ್ಟು ಯಾವಜ್ಜೀವ ಪರಿಯಂತರದಿ–
ತುಚ್ಛರ ಸೇವೆಯಿಂದುಪಜೀವಿಸುವರಜ್ಞಾನಕೊಳಗಾಗಿ ॥ ೧೬ ॥

ಕಾಮ–ಲೋಭ–ಕ್ರೋಧ–ಮದ–ಹಿಂಸ–ಆಮಯ–ಅನೃತ–ಕಪಟ–
ತ್ರಿಧಾಮನವತಾರಗಳ ಭೇದ–ಅಪೂರ್ಣಸುಖಬದ್ಧ–
ಆಮಿಷನಿವೇದಿತ ಅಭೋಜ್ಯದಿ ತಾಮಸಾನ್ನವನುಂಬ ತಾಮಸ,
ಶ್ರೀಮದಾಂಧರ ಸಂಗದಿಂದಲಿ ತಮವೆ ವರ್ಧಿಪುದು ॥ ೧೭ ॥

ಜ್ಞಾನ ಭಕ್ತಿ ವಿರಕ್ತಿ ವಿನಯ ಪುರಾಣ ಶ್ರವಣ ಶಾಸ್ತ್ರ ಚಿಂತನ–
ದಾನ ಶಮ ದಮ ಯಜ್ಞ ಸತ್ಯಾಹಿಂಸ ಭೂತದಯ–
ಧ್ಯಾನ ಭಗವನ್ನಾಮ ಕೀರ್ತನ ಮೌನ ಜಪ ತಪ ವ್ರತ–
ಸುತೀರ್ಥ ಸ್ನಾನ ಮಂತ್ರ ಸ್ತೋತ್ರ ವಂದನ ಸಜ್ಜನರ ಗುಣವು ॥ ೧೮ ॥

ಲೇಶ ಸ್ವಾತಂತ್ರ್ಯ ಗುಣವನು ಪ್ರವೇಶಗೈಸಿದ ಕಾರಣದಿ,
ಗುಣ ದೋಷಗಳು ತೋರುವವು ಸತ್ವಾಸತ್ವ ಜೀವರೊಳು,
ಶ್ವಾಸ ಭೋಜನ ಪಾನ ಶಯನ ವಿಲಾಸ ಮೈಥುನ ಗಮನ ಹರುಷ ಕ್ಲೇಶ–
ಸ್ವಪ್ನ ಸುಷುಪ್ತಿ ಜಾಗ್ರತಿಯಹವು ಚೇತನಕೆ ॥ ೧೯ ॥

ಅರ್ಥ ತನ್ನೊಳಗಿರಿಸಿ ಉಳಿದೊಂದರ್ಥವ ವಿಭಾಗಗೈಸಿ–
ವೃಜಿನಾರ್ದನನು ಪೂರ್ವದಲಿ ಸ್ವಾತಂತ್ರ್ಯವ ಕೊಟ್ಟಂತೆ,
ಸ್ವರ್ಧುನೀಪಿತ ಕೊಡುವವರ ಸುಖ ವೃದ್ಧಿಗೋಸುಗ,
ಬ್ರಹ್ಮ ವಾಯು ಕಪರ್ದಿ ಮೊದಲಾದವರೊಳಿದ್ದವರಯೋಗ್ಯತೆಯನರಿತು ॥ ೨೦ ॥

ಹಲಧರಾನುಜ ಮಾಳ್ಪ ಕೃತ್ಯವ ತಿಳಿಯದೆ,
ಆಹಂಕಾರದಿಂದೆನ್ನುಳಿದು ವಿಧಿನಿಷೇದ ಪಾತ್ರರು ಇಲ್ಲ ವೆಂಬುವಗೆ–
ಫಲಗಳ ದ್ವಯ ಕೊಡುವ, ದೈತ್ಯರ ಕಲುಷ ಕರ್ಮವ ಬಿಟ್ಟು ಪುಣ್ಯವ ಸೆಳೆದು–
ತನ್ನೊಳಗಿಟ್ಟು ಕ್ರಮದಿಂ ಕೊಡುವ ಭಕ್ತರಿಗೆ ॥ ೨೧ ॥

ತೋಯಜಾಪ್ತನ ಕಿರಣ ವೃಕ್ಷಚ್ಛಾಯ ವ್ಯಕ್ತಿಸುವಂತೆ,
ಕಮಲದಳಾಯತಾಕ್ಷನು ಸರ್ವರೊಳು ವ್ಯಾಪಿಸಿದ ಕಾರಣದಿ,
ಹೇಯ ಸದ್ಗುಣ ಕರ್ಮ ತೋರ್ಪವು ನ್ಯಾಯಕೋವಿದರಿಗೆ,
ನಿರಂತರ ಶ್ರೀಯರಸ ಸರ್ವೋತ್ತಮೋತ್ತಮನೆಂದು ಪೇಳುವರು ॥ ೨೨ ॥

ಮೂಲ ಕಾರಣ ಪ್ರಕೃತಿಯೆನಿಪ ಮಹಾಲಕುಮಿ,
ಎಲ್ಲರೊಳಗಿದ್ದು ಸುಲೀಲೆಗೈವುತ ಪುಣ್ಯ ಪಾಪಗಳರ್ಪಿಸಲು ಪತಿಗೆ,
ಪಾಲಗಡಲೊಳು ಬಿದ್ದ ಜಲ ಕೀಲಾಲವೆನಿಪುದೆ,
ಜೀವಕೃತ ಕರ್ಮಾಳಿ ತದ್ವತು ಶುಭವುಯೆನಿಪವು ಎಲ್ಲ ಕಾಲದಲಿ ॥ ೨೩ ॥

ಜ್ಞಾನ ಸುಖ ಬಲ ಪೂರ್ಣ ವಿಷ್ಣುವಿಗೇನು ಮಾಳ್ಪವು ತ್ರಿಗುಣಕಾರ್ಯ,
ಕೃಶಾನುವಿನ ಕೃಮಿಕವಿದು ಭಕ್ಷಿಪದುಂಟೆ ಲೋಕದೊಳು,
ಈ ನಳಿನಜಾಂಡವನು ಬ್ರಹ್ಮೇಶಾನ ಮುಖ್ಯ ಸುರಾಸುರರ–
ಕಾಲಾನಳನವೋಲ್ನುಂಗುವಗೀ ಪಾಪಗಳ ಭಯವೆ ॥ ೨೪ ॥

ಮೋದಶಿರ ದಕ್ಷಿಣ ಸುಪಕ್ಷ, ಪ್ರಮೋದ ಉತ್ತರ ಪಕ್ಷವೆಂದು,
ಋಗಾದಿ ಶ್ರುತಿಗಳು ಪೇಳುವವು ಆನಂದಮಯ ಹರಿಗೆ,
ಮೋದವೈಷಿಕ ಸುಖ ವಿಶಿಷ್ಟ ಪ್ರಮೋದ ಪಾರತ್ರಿಕ ಸುಖಪ್ರದನಾದ ಕಾರಣದಿಂದ,
ಮೋದ ಪ್ರಮೋದನೆನಿಸಿದನು ॥ ೨೫ ॥

ಎಂದಿಗಾದರು ವೃಷ್ಟಿಯಿಂದ ವಸುಂಧರೆಯೊಳಗಿಪ್ಪಖಿಳ ಜಲದಿಂ-
ಸಿಂಧು ವೃದ್ಧಿಯನೈದುವದೆ ಬಾರದಿರೆ ಬರಿದಹುದೆ,
ಕುಂದು ಕೊರತೆಗಳಿಲ್ಲದಿಹ ಸ್ವಾನಂದ ಸಂಪೂರ್ಣ ಸ್ವಭಾವಗೆ-
ಬಂದು ಮಾಡುವದೇನು ಕರ್ಮಾಕರ್ಮ ಜನ್ಯಫಲ ॥ ೨೬ ॥

ದೇಹವೃಕ್ಷದೊಳೆರಡು ಪಕ್ಷಿಗಳಿಹವೆಂದಿಗು ಬಿಡದೆ ಪರಮಸ್ನೇಹದಿಂದಲಿ-
ಕರ್ಮಜ ಫಲಗಳುಂಬ ಜೀವಖಗ,
ಶ್ರೀಹರಿಯು ತಾ ಸಾರಭೋಕ್ತನು, ದ್ರೋಹಿಸುವ ಕಲ್ಯಾದಿ ದೈತ್ಯ ಸಮೂಹಕೀವ-
ವಿಶಿಷ್ಟ ಪಾಪವ ಲೇಶವೆಲ್ಲರಿಗೆ ॥ ೨೭ ॥

ದ್ಯುಮಣಿ ಕಿರಣವ ಕಂಡ ಮಾತ್ರದಿ ತಿಮಿರವೋಡುವ ತೆರದಿ,
ಲಕ್ಷ್ಮೀರಮಣ ನೋಡಿದ ಮಾತ್ರದಿಂದಘನಾಶವೈದುವದು,
ಕಮಲಸಂಭವ ಮುಖ್ಯ ಎಲ್ಲಾ ಸುಮನಸರೊಳಿಹ ಪಾಪರಾಶಿಯ-
ಅಮರ ಮುಖನಂದದಲಿ ಭಸ್ಮವ ಮಾಳ್ಪ ಹರಿತಾನು ॥ ೨೮ ॥

ಚತುರ ಶತಭಾಗದಿ ದಶಾಂಶದೊಳಿತರ ಜೀವರಿಗೀವ,
ಲೇಶವ ದಿತಿಜ ದೇವಕ್ಕಳಿಗೆ ಕೊಡುವ ವಿಶಿಷ್ಟ ದುಃಖ ಸುಖ,
ಮತಿವಿಹೀನ ಪ್ರಾಣಿಗಳಿಗಾಹುತಿಯ ಸುಖ ಮೃತಿ ದುಃಖವರ-
ಯೋಗ್ಯತೆಯನರಿತು ಪಿಪೀಲ ಮಶಕಾದಿಗಳಿಗೀವ ಹರಿ ॥ ೨೯ ॥

ನಿತ್ಯ ನಿರಯಾಂಧಾಖ್ಯ ಕೂಪದಿ ಭೃತ್ಯರಿಂದೊಡಗೂಡಿ,
ಪುನರಾವೃತ್ತಿ ವರ್ಜಿತ ಲೋಕವೈದುವ ಕಲಿಯು ದ್ವೇಷದಲಿ,
ಸತ್ಯಲೋಕಾಧಿಪ ಚತುರ್ಮುಖ ತತ್ವದೇವಕ್ಕಳ ಸಹಿತ,
ನಿಜ ಮುಕ್ತಿಯೈದುವ ಹರಿ ಪದಾಬ್ಜವ ಭಜಿಸಿ ಭಕುತಿಯಲಿ ॥ ೩೦ ॥

ವಿಧಿನಿಷೇಧಗಳೆರಡು ಮರೆಯದೆ ಮಧುವಿರೋಧಿಯ ಪಾದಕರ್ಪಿಸು,
ಅದಿತಿ ಮಕ್ಕಳಿಗೀವ ಪುಣ್ಯವ ಪಾಪ ದೈತ್ಯರಿಗೆ,
ಸುದರುಶನಧರಗೀಯದಿರೆ ಬಂದೊದಗಿ ಒಯ್ವರು ಪುಣ್ಯ ದೈತ್ಯರು,
ಅಧಿಪರಿಲ್ಲದ ವೃಕ್ಷಗಳ ಫಲದಂತೆ ನಿತ್ಯದಲಿ ॥ ೩೧ ॥

ತಿಲಜ ಕಶ್ಮಲ ತ್ಯಜಿಸಿ ದೀಪವು ತಿಳಿಯ ತೈಲವಗ್ರಹಿಸಿ–
ಮಂದಿರದೊಳಗೆ ವ್ಯಾಪಿಸಿಯಿಪ್ಪ ಕತ್ತಲೆ ಭಂಗಿಸುವ ತೆರದಿ,
ಕಲಿ ಮೊದಲುಗೊಂಡಖಿಳ ದಾನವ ಕುಲಜರನುದಿನ ಮಾಳ್ಪ ಪುಣ್ಯಜ ಫಲವ,
ಬ್ರಹ್ಮಾದ್ಯರಿಗೆ ಕೊಟ್ಟಲ್ಲಲ್ಲೆ ರಮಿಸುವವನು ॥ ೩೨ ॥

ಇದ್ದಲೆಯು ನಿತ್ಯದಲಿ ಮೇಧ್ಯಾಮೇಧ್ಯ ವಸ್ತುಗಳುಂಡು,
ಲೋಕದಿ ಶುದ್ಧ ಸುಚಿಯೆಂದೆನಿಸಿಕೊಂಬನು ವೇದಸ್ಮೃತಿಗಳೊಳು,
ಬುದ್ಧಿ ಪೂರ್ವಕವಾಗಿ ವಿಬುಧರು ಶ್ರದ್ಧೆಯಿಂದರ್ಪಿಸಿದ ಕರ್ಮ,
ನಿಷಿದ್ಧವಾದರು ಸರಿಯೆ ಕೈಕೊಂಡುದ್ಧರಿಸುತಿಪ್ಪ ॥ ೩೩ ॥

ಒಡೆಯರಿದ್ದ ವನಸ್ಥಫಲಗಳ ಬಡಿದು ತಿಂಬುವರುಂಟೆ?
ಕಂಡರೆ ಹೊಡೆದು ಬಿಸಟುವರೆಂಬ ಭಯದಿಂ ನೋಡಲಂಜುವರು,
ಬಿಡದೆ ಮಾಡುವ ಕರ್ಮಗಳ ಮನೆ ಮಡದಿ ಮಕ್ಕಳು ಬಂಧುಗಳು,
ಕಾರೊಡಲನ ಆಳ್ಗಳು ಯೆಂದಮಾತ್ರದಲೋಡುವವು ದುರಿತ ॥ ೩೪ ॥

ಜ್ಞಾನ ಕರ್ಮೇಂದ್ರಿಯಗಳಿಂದೇನೇನು ಮಾಡುವ ಕರ್ಮಗಳ,
ಲಕ್ಷ್ಮೀ ನಿವಾಸನಿಗರ್ಪಿಸುತಲಿರು ಕಾಲ ಕಾಲದಲಿ,
ಪ್ರಾಣಪತಿ ಕೈಕೊಂಡು ನಾನಾ ಯೋನಿ ಯೈದಿಸನು,
ಒಮ್ಮೆಕೊಡದಿರೆ ದಾನವರು ಶಳೆದೊಯ್ವರೆಲ್ಲಾ ಪುಣ್ಯರಾಶಿಗಳ ॥ ೩೫ ॥

ಶ್ರುತಿ ಸ್ಮೃತ್ಯರ್ಥವ ತಿಳಿದಹಂಮತಿ ವಿಶಿಷ್ಟನು ಕರ್ಮ ಮಾಡಲು,
ಪ್ರತಿಗ್ರಹಿಸನು ಪಾಪಗಳನು ಕೊಡುತಿಪ್ಪ ನಿತ್ಯ ಹರಿ,
ಚತುರ ದಶ ಭುವನಾಧಿಪತಿ ಕೃತ ಕೃತ ಕೃತಜ್ಞ ನಿಯಾಮಕನು ಯೆನೆ,
ಮತಿ ಭ್ರಂಶ ಪ್ರಮಾದ ಸಂಕಟ ದೋಷವವಗಿಲ್ಲ ॥ ೩೬ ॥

ವಾರಿಜಾಸನ ಮುಖ್ಯರಾಜ್ಞಾಧಾರಕರು,
ಸರ್ವ ಸ್ವತಂತ್ರ ರಮಾರಮಣನೆಂದರಿದು–
ಇಷ್ಟಾನಿಷ್ಟ ಕರ್ಮಫಲ ಸಾರ ಭೋಕ್ತನಿಗರ್ಪಿಸಲು ಸ್ವೀಕಾರ ಮಾಡುವ,
ಪಾಪ ಫಲವ ಕುಬೇರನಾಮಕ ದೈತ್ಯರಿಗೆ ಕೊಟ್ಟವರ ನೋಯಿಸುವ ॥ ೩೭ ॥

ಕ್ರೂರದೈತ್ಯರೊಳಿದ್ದು ತಾನೇ ಪ್ರೇರಿಸುವ ಕಾರಣದಿ ಹರಿಗೆ ಕುಬೇರನೆಂಬರು,
ಎಲ್ಲರೊಳು ನಿರ್ಗತರತಿಗೆ ನಿರತಿ,
ಸೂರಿಗಮ್ಯಗೆ ಸೂರ್ಯನೆಂಬರು,
ದೂರಶೋಕಗೆ ಶುಕ್ಲ ಲಿಂಗ ಶರೀರಯಿಲ್ಲದ ಕಾರಣದಿ ಅಕಾಯನೆನಿಸುವನು ॥ ೩೮ ॥

ಪೇಳಲೊಶವಲ್ಲದ ಮಹಾ ಪಾಪಾಳಿಗಳನು–
ಒಂದೇ ಕ್ಷಣದಿ ನಿರ್ಮೂಲಗೈಸಲು ಬೇಕು ಎಂಬುವಗೊಂದೆ ಹರಿನಾಮ–
ನಾಲಿಗೆಯೊಳುಳ್ಳವಗೆ ಪರಮ ಕೃಪಾಳು ಕೃಷ್ಣನು ಕೈವಿಡಿದು–
ತನ್ನಾಲಯದೊಳಿಟ್ಟನುದಿನದಿ ಆನಂದ ಬಡಿಸುವನು ॥ ೩೯ ॥

ರೋಗಿ ಔಷಧ ಪಥ್ಯದಿಂದ ನಿರೋಗಿಯೆನಿಸುವ ತೆರದಿ,
ಶ್ರೀಮದ್ಭಾಗವತ ಸುಶ್ರವಣಗೈದು ಭವಾಖ್ಯ ರೋಗವನು ನೀಗಿ,
ಶಬ್ದಾದ್ಯಖಿಳ ವಿಷಯ ನಿಯೋಗಿಸು,
ದಶೇಂದ್ರಿಯ ಅನಿಲನೊಳು ಶ್ರೀಗುರು ಜಗನ್ನಾಥ ವಿಠಲ ಪ್ರೀತನಾಗುವನು ॥ ೪೦ ॥

॥ ಶ್ರೀ ಕ್ರೀಡಾವಿಲಾಸ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

## ॥ ೨೬. ಶ್ರೀ ಅವರೋಹಣ ತಾರತಮ್ಯ ಸಂಧಿ ॥

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ,
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥

ಶ್ರೀರಮಣ ನಿಜಭಕ್ತರೆನಿಸುವ ವಾರಿಜಾಸನ ಮುಖ್ಯ ನಿರ್ಜರ–
ತಾರತಮ್ಯವ ಪೇಳ್ವೆ ಸಂಕ್ಷೇಪದಲಿ ಗುರುಬಲದಿ ॥

ಕೇಶವಗೆ ನಾರಾಯಣಿಗೆ ಕಮಲಾಸನ ಸಮೀರರಿಗೆ ವಾಣಿಗೆ–
ವೀಶ ಫಣಿಪ ಮಹೇಶರಿಗೆ ಷಣ್ಮಹಿಷಿಯರ ಪದಕೆ–
ಶೇಷ ರುದ್ರರ ಪತ್ನಿಯರಿಗೆ ಸುವಾಸವ ಪ್ರದ್ಯುಮ್ನರಿಗೆ,
ಸಂತೋಷದಲಿ ವಂದಿಸುವೆ ಭಕ್ತಿಜ್ಞಾನ ಕೊಡಲೆಂದು ॥ ೧ ॥

ಪ್ರಾಣದೇವಗೆ ನಮಿಪೆ, ಕಾಮನ ಸೂನು ಮನುಗುರು ದಕ್ಷ–
ಶಚಿ ರತಿ ಮಾನಿನಿಯರಿಗೆ, ಪ್ರವಹದೇವಗೆ, ಸೂರ್ಯಸೋಮ ಯಮ ಮಾನವಿಗೆ,
ವರುಣನಿಗೆ ವೀಣಾಪಾಣಿ ನಾರದಮುನಿಗೆ ನಮಿಸುವೆ,
ಜ್ಞಾನ ಭಕ್ತಿ ವಿರಕ್ತಿ ಮಾರ್ಗವ ತಿಳಿಸಲೆನಗೆಂದು ॥ ೨ ॥

ಅನಳ ಭೃಗು ದಾಕ್ಷಾಯಣಿಯರಿಗೆ ಕನಕ ಗರ್ಭಜ ಸಪ್ತ ಋಷಿಗಳಿಗೆಣೆಯೆನಿಪ-
ವೈವಸ್ವತಮನು ಗಾಧಿ ಸಂಭವಗೆ-
ದನುಜ ನಿರಋತಿ ತಾರ ಪ್ರಾವಹಿ ವನಜ ಮಿತ್ರಗೆ ಅಶ್ವಿನೀ-
ಗಣಪಾ ಧನಪ ವಿಷ್ವಕ್ಸೇನರಿಗೆ ವಂದಿಸುವೆನನವರತ ॥ ೩ ॥

ಉಕ್ತ ದೇವರ್ಕಳನುಳಿದು ಎಂಭತ್ತಯಿದು ಜನರುಗಳು, ಮನುಗಳು,
ಉಚಿಥ್ಯ ಚ್ಯಾವನ ಯಮಳರಿಗೆ ಕರ್ಮಜರೆನಿಸುತಿಪ್ಪ ಕಾರ್ತವೀರ್ಯಾರ್ಜುನ-
ಪ್ರಮುಖ ಶತಸ್ಥರಿಗೆ, ಪರ್ಜನ್ಯ ಗಂಗಾದಿತ್ಯ-
ಯಮ ಸೋಮಾನಿರುದ್ಧರ ಪತ್ನಿಯರ ಪದಕೆ ॥ ೪ ॥

ಹುತವಹನರ್ಧಾಂಗಿನಿಗೆ, ಚಂದ್ರನ ಸುತ ಬುಧಗೆ, ನಾಮಾತ್ಮಿಕ ಉಷಾಸತಿಗೆ,
ಛಾಯಾತ್ಮಜ ಶನೈಶ್ಚರಗಾನಮಿಪೆ ಸತತ,
ಪ್ರತಿ ದಿವಸದಲಿ ಬಿಡದೆ ಜೀವ ಪ್ರತತಿ ಮಾಡುವ-
ಕರ್ಮಗಳಿಗಧಿಪತಿಯೆನಿಪ ಪುಷ್ಕರನ ಪಾದಾಂಬುಜಗಳಿಗೆ ನಮಿಪೆ ॥ ೫ ॥

ಆ ನಮಿಪೆ ಆಜಾನಜರಿಗೆ ಸುಕೃಶಾನು ಸುತರಿಗೆ, ಗೋವ್ರಜದೊಳಿಹ ಮಾನಿನಿಯರಿಗೆ-
ಚಿರಪಿತರು ಶತನ್ಯೂನ ಶತಕೋಟಿ ಮೌನಿಜನರಿಗೆ,
ದೇವ ಮಾನವ ಗಾನ ಪ್ರೌಢರಿಗೆ, ಅವನಿಪರಿಗೆ,
ರಮಾನಿವಾಸನ ದಾಸವರ್ಗಕೆ ನಮಿಪೆನನವರತ ॥ ೬ ॥

ಅನುಕ್ರಮಣಿಕ ತಾರತಮ್ಯವ ಅನುದಿನದಿ ಸದ್ಭಕ್ತಿಪೂರ್ವಕ ನೆನೆವರಿಗೆ-
ಧರ್ಮಾರ್ಥ ಕಾಮಾದಿಗಳು ಫಲಿಸುವವು,
ವನಜ ಸಂಭವ ಮುಖ್ಯರವಯವರೆನಿಸುವ ಜಗನ್ನಾಥ ವಿಠಲನ,
ವಿನಯದಿಂದಲಿ ನಮಿಸಿ ಕೊಂಡಾಡುತಿರು ಮರೆಯದಲೆ ॥ ೭ ॥

॥ ಇತಿ ಶ್ರೀ ಅವರೋಹಣ ತಾರತಮ್ಯ ಸಂಧಿ ಸಂಪೂರ್ಣಂ ॥

॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

॥ ೨೭. ಶ್ರೀ ಅನುಕ್ರಮಣಿಕಾ ತಾರತಮ್ಯ ಸಂಧಿ ॥

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ,
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥

ಮನುಜ ಉತ್ತಮವಿಡಿದು ಸಂಕರುಷಣನ ಪರಿಯಂತರದಿ ಪೇಳಿದ–
ಅನುಕ್ರಮಣಿಕೆಯ ಪದ್ಯವನು ಕೇಳುವುದು ಸಜ್ಜನರು ॥

ಶ್ರೀಮದಾಚಾರ್ಯರ ಮತಾನುಗಧೀಮತಾಂವರರಂಘ್ರಿ ಕಮಲಕೆ,
ಸೋಮ ಪಾನಾರ್ಹರಿಗೆ ತಾತ್ವಿಕ ದೇವತಾ ಗಣಕೆ,
ಹೈಮವತಿ ಷಣ್ಮಹಿಷಿಯರ ಪದ, ವ್ಯೋಮಕೇಶಗೆ,
ವಾಣಿ ವಾಯೂ ತಾಮರಸಭವ ಲಕ್ಷ್ಮಿನಾರಾಯಣರಿಗಾನಮಿಪೆ ॥ ೧ ॥

ಶ್ರೀಮತಾಂವರ ಶ್ರೀಪತೇ ಸತ್ಕಾಮಿತಪ್ರದ ಸೌಮ್ಯ ತ್ರಿಕಕುದ್ಧಾಮ,
ತ್ರಿಚತು: ಪಾದ ಪಾವನ ಚರಿತ ಚಾರ್ವಾಂಗ,
ಗೋಮತಿಪ್ರಿಯ ಗೌಣ ಗುರುತಮ, ಸಾಮಗಾಯನಲೋಲ, ಸರ್ವ ಸ್ವಾಮಿ,
ಮಮ ಕುಲದೈವ ಸಂತೈಸುವದು ಸಜ್ಜನರ ॥ ೨ ॥
ರಾಮ ರಾಕ್ಷಸ ಕುಲಭಯಂಕರ, ಸಾಮ ಜೇಂದ್ರಪ್ರಿಯ,
ಮನೋ ವಾಚಾಮಗೋಚರ, ಚಿತ್ಸುಖಪ್ರದ, ಚಾರುತರ ಚರಿತ,
ಭೂಮ ಭೂ ಸ್ವರ್ಗಾಪ ವರ್ಗದ ಕಾಮಧೇನು ಸುಕಲ್ಪತರು ಚಿಂತಾಮಣಿ ಯೆಂದೆನಿಪ–
ನಿಜ ಭಕ್ತರಿಗೆ ಸರ್ವತ್ರ ॥ ೩ ॥

ಸ್ವರ್ಣ ವರ್ಣ ಸ್ವತಂತ್ರ, ಸರ್ವಗ, ಕರ್ಣಹೀನಸುಶಯ್ಯ, ಶಾಶ್ವತ,
ವರ್ಣ ಚತುರಾಶ್ರಮವಿವರ್ಜಿತ, ಚಾರುತರ ಸ್ವರತ,
ಅರ್ಣ ಸಂಪ್ರತಿಪಾದ್ಯ, ವಾಯು ಸುಪರ್ಣ ವರವಹನ ಅಪ್ರತಿಮ,
ವಟಪರ್ಣ ಶಯನಾಶ್ರಯ (ಶ್ಚರ್ಯ) ತಮ, ಸಚ್ಚರಿತ ಗುಣಭರಿತ ॥ ೪ ॥

ಅಗಣಿತ ಸುಗುಣಧಾಮ, ನಿಶ್ಚಲ, ಸ್ವಗತ ಭೇದ ವಿಶೂನ್ಯ, ಶಾಶ್ವತ,
ಜಗದ ಜೀವಾತ್ಯಂತ ಭಿನ್ನಾಪನ್ನ ಪರಿಪಾಲ,
ತ್ರಿಗುಣ ವರ್ಜಿತ, ತ್ರಿಭುವನೇಶ್ವರ, ಹಗಳಿರುಳು ಸ್ಮರಿಸುತಲಿಹರ ಬಿಟ್ಟಗಲ–
ಶ್ರೀಜಗನ್ನಾಥ ವಿಠಲ ವಿಶ್ವ ವ್ಯಾಪಕನು ॥ ೫ ॥

॥ ಇತಿ ಶ್ರೀ ಅನುಕ್ರಮಣಿಕಾ ತಾರತಮ್ಯ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

## ॥ ೨೮. ಶ್ರೀ ವಿಘ್ನೇಶ್ವರ ಸ್ತೋತ್ರ ಸಂಧಿ ॥
## ॥ ೨೮. ಶ್ರೀ ಗಣಪತಿ ಸ್ತೋತ್ರ ಸಂಧಿ ॥

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ,
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥

ಶ್ರೀಶನಂಘ್ರಿ ಸರೋಜ ಭೃಂಗ, ಮಹೇಶ ಸಂಭವ,
ಮನ್ಮನದೊಳು ಪ್ರಕಾಶಿಸನುದಿನ ಪ್ರಾರ್ಥಿಸುವೆ ಪ್ರೇಮಾತಿಶಯದಿಂದ,
ನೀ ಸಲಹು ಸಜ್ಜನರ, ವೇದವ್ಯಾಸ ಕರುಣಾಪಾತ್ರ,
ಮಹದಾಕಾಶಪತಿ ಕರುಣಾಳು ಕೈಪಿಡಿದೆಮ್ಮನುದ್ಧರಿಸು ॥ ೧ ॥

ಏಕದಂತ, ಇಭೇಂದ್ರಮುಖ, ಚಾಮೀಕರ ಕೃತ ಭೂಷಣಾಂಗ,
ಕೃಪಾಕಟಾಕ್ಷದಿ ನೋಡು ವಿಜ್ಞಾಪಿಸುವೆ ಇನಿತೆಂದು,
ನೋಕನೀಯನ ತುತಿಸುತಿಪ್ಪ ವಿವೇಕಿಗಳ ಸಹವಾಸ ಸುಖಗಳ–
ನೀ ಕರುಣಿಸುವುದೆಮಗೆ ಸಂತತ ಪರಮ ಕರುಣಾಳು ॥ ೨ ॥

ವಿಘ್ನರಾಜನೆ ದುರ್ವಿಷಯದೊಳು ಮಗ್ನವಾಗಿಹ ಮನವ–
ಮಹದೋಷಘ್ನನಂಘ್ರಿ ಸರೋಜ ಯುಗಳದಿ ಭಕ್ತಿ ಪೂರ್ವಕದಿ ಲಗ್ನವಾಗಲಿ ನಿತ್ಯ,
ನರಕ ಭಯಾಗ್ನಿಗಳಿಗಾನಂಜೆ–ಗುರುವರ–
ಭಗ್ನಗೈಸೆನ್ನವಗುಣಗಳನ್ನು ಪ್ರತಿ ದಿವಸದಲ್ಲಿ ॥ ೩ ॥

ಧನಪ ವಿಷ್ವಕ್ಸೇನ ವೈದ್ಯಾಶ್ವಿನಿಗಳಿಗೆ ಸರಿಯೆನಿಪ ಷಣ್ಮುಖನನುಜ,
ಶೇಷ ಶತಸ್ಥ ದೇವೋತ್ತಮ, ವಿಯದ್ಗಂಗಾವಿನುತ,
ವಿಶ್ವೋ ಪಾಸಕನೆ, ಸನ್ಮನದಿ ವಿಜ್ಞಾಪಿಸುವೆ,
ಲಕ್ಷ್ಮೀವನಿತೆಯರಸನ ಭಕ್ತಿ ಜ್ಞಾನ ಕೊಟ್ಟು ಸಲಹುವದು ॥ ೪ ॥

ಚಾರುದೇಷ್ಣಾಹ್ವಯನೆನಿಸಿ ಅವತಾರ ಮಾಡಿದೆ ರುಗ್ಮಿಣೀಯಲಿ,
ಗೌರಿ ಅರಸನ ವರದಿ ಉದ್ಧಟರಾದ ರಾಕ್ಷಸರ–
ಶೌರಿ ಆಜ್ಞದಿ ಸಂಹರಿಸಿ ಭೂಭಾರ ವಿಳುಹಿದ ಕರುಣಿ,
ತ್ವತ್ಪಾದಾರ ವಿಂದಕೆ ನಮಿಪೆ ಕರುಣಿಪುದೆಮಗೆ ಸನ್ಮತಿಯ ॥ ೫ ॥

ಶೂರ್ಪ ಕರ್ಣದ್ವಯ, ವಿಜಿತ ಕಂದರ್ಪ ಶರ, ಉದಿತಾರ್ಕ ಸನ್ನಿಭ,
ಸರ್ಪವರ ಕಟಿಸೂತ್ರ, ವೈಕೃತ ಗಾತ್ರ, ಸುಚರಿತ್ರ,
ಸ್ವರ್ಪಿತಾಂಕುಶ ರದನ ಕರ, ಖಳದರ್ಪ ಭಂಜನ, ಕರ್ಮ ಸಾಕ್ಷಿಗ,
ತರ್ಪಕನು ನೀನಾಗಿ ತೃಪ್ತಿಯ ಬಡಿಸು ಸಜ್ಜನರ ॥ ೬ ॥

ಖೇಶ, ಪರಮ ಸುಭಕ್ತಿ ಪೂರ್ವಕ ವ್ಯಾಸಕೃತ ಗ್ರಂಥಗಳನರಿತು–
ಪ್ರಯಾಸವಿಲ್ಲದೆ ಬರೆದು ವಿಸ್ತರಿಸಿದಿಯೊ ಲೋಕದೊಳು,
ಪಾಶ ಪಾಣಿಯೆ ಪ್ರಾರ್ಥಿಸುವೆ, ಉಪದೇಶಿಸೆನಗದರರ್ಥಗಳ,
ಕರುಣಾ ಸಮುದ್ರ ಕೃಪಾಕಟಾಕ್ಷದಿ ನೋಡಿ ಪ್ರತಿದಿನದಿ ॥ ೭ ॥

ಶ್ರೀಶನ ಅತಿ ನಿರ್ಮಲ ಸುನಾಭೀದೇಶವಸ್ಥಿತ,
ರಕ್ತ ಶ್ರೀಗಂಧಾಸುಶೋಭಿತಗಾತ್ರ ಲೋಕ ಪವಿತ್ರ ಸುರಸ್ತೋತ್ರ,
ಮೂಷಕಸುವರವಹನ್, ಪ್ರಾಣಾವೇಶಯುತ ಪ್ರಖ್ಯಾತ ಪ್ರಭು,
ಪೂರೈಸು ಭಕ್ತರು ಬೇಡಿದಿಷ್ಟಾರ್ಥಗಳ ಪ್ರತಿದಿನದಿ ॥ ೮ ॥

ಶಂಕರಾತ್ಮಜ, ದೈತ್ಯರಿಗತಿ ಭಯಂಕರ ಗತಿಗಳೀಯ ಲೋಸುಗ–
ಸಂಕಟ ಚತುರ್ಥಿಗನೆನಿಸಿ ಅಹಿತಾರ್ಥಗಳ ಕೊಟ್ಟು ಮಂಕುಗಳ ಮೋಹಿಸುವೆ,
ಚಕ್ರದರಾಂಕಿತನ ದಿನದಿನದಿ ತ್ವತ್ಪದ ಪಂಕಜಂಗಳಿಗೆ–
ಎರಗಿ ಬಿನ್ನೈಸುವೆನು ಪಾಲಿಪುದು ॥ ೯ ॥

ಸಿದ್ಧ ವಿದ್ಯಾಧರಗಣ ಸಮಾರಾಧ್ಯ, ಚರಣ ಸರೋಜ, ಸರ್ವಸು ಸಿದ್ಧಿ ದಾಯಕ,
ಶೀಘ್ರದಿಂ ಪಾಲಿಪುದು ಬಿನ್ನೈಪೆ,
ಬುದ್ಧಿ ವಿದ್ಯಾ ಜ್ಞಾನ ಬಲ ಪರಿಶುದ್ಧ ಭಕ್ತಿ ವಿರಕ್ತಿ–
ನಿರುತನವದ್ಯನ ಸ್ಮೃತಿ ಲೀಲೆಗಳ ಸುಸ್ತವನ ವದನದಲಿ ॥ ೧೦ ॥

ರಕ್ತವಾಸದ್ವಯ ವಿಭೂಷಣ, ಉಕ್ತಿ ಲಾಲಿಸು ಪರಮ ಭಗವದ್ಭಕ್ತವರ,
ಭವ್ಯಾತ್ಮ ಭಾಗವತಾದಿ ಶಾಸ್ತ್ರದಲಿ ಸಕ್ತವಾಗಲಿ ಮನವು,
ವಿಷಯ ವಿರಕ್ತಿ ಪಾಲಿಸು ವಿದ್ವದಾದ್ಯ,
ವಿಮುಕ್ತನೆಂದೆನಿಸೆನ್ನ ಭವ ಭಯ ದಿಂದಲನುದಿನದಿ ॥ ೧೧ ॥

ಶುಕ್ರ ಶಿಷ್ಯರ ಸಂಹರಿಪುದಕೆ ಶಕ್ರ ನಿನ್ನನು ಪೂಜಿಸಿದನು,
ಉರುಕ್ರಮ ಶ್ರೀರಾಮಚಂದ್ರನು ಸೇತುಮುಖದಲ್ಲಿ,
ಚಕ್ರವರ್ತಿಪ ಧರ್ಮರಾಜನು ಚಕ್ರ ಪಾಣಿಯ ನುಡಿಗೆ ಭಜಿಸಿದ,
ವಕ್ರತುಂಡನೆ ನಿನ್ನೊಳೆಂತುದೊ ಈಶನುಗ್ರಹವು ॥ ೧೨ ॥

ಕೌರವೇಂದ್ರನು ನಿನ್ನ ಭಜಿಸದ ಕಾರಣದಿ–
ನಿಜಕುಲ ಸಹಿತ ಸಂಹಾರವೈದಿದ ಗುರುವರ ವೃಕೋದರನ ಗದೆಯಿಂದ,
ತಾರಕಾಂತಕನನುಜ ಎನ್ನ ಶರೀರದೊಳು ನೀ ನಿಂತು–
ಧರ್ಮ ಪ್ರೇರಕನು ನೀನಾಗಿ ಸಂತೈಸೆನ್ನ ಕರುಣದಲಿ ॥ ೧೩ ॥

ಏಕವಿಂಶತಿ ಮೋದಕಪ್ರಿಯ ಮೂಕರನು ವಾಗ್ಮಿಗಳ ಮಾಳ್ಪೆ,
ಕೃಪಾಕರೇಶ, ಕೃತಜ್ಞ, ಕಾಮದ ಕಾಯೋ ಕೈಪಿಡಿದು,
ಲೇಖಕಾಗ್ರಣಿ ಮನ್ಮನದ ದುರ್ವಾಕ್ಯಕುಲವ ಪರಿಹರಿಸು ದಯದಿ,
ಪಿನಾಕಿ ಭಾರ್ಯಾತನುಜ ಮೃದ್ಭವ ಪ್ರಾರ್ಥಿಸುವೆನೀಗಾ ॥ ೧೪ ॥

ನಿತ್ಯ ಮಂಗಳ ಚರಿತ, ಜಗದುತ್ಪತ್ತಿ ಸ್ಥಿತಿ ಲಯ ನಿಯಮನ–
ಜ್ಞಾನತ್ರಯಪ್ರದ ಬಂಧಮೋಚಕ ಸುಮನಸಾಸುರರ ಚಿತ್ತ ವೃತ್ತಿಗಳಂತೆ ನಡೆವ–
ಪ್ರಮತ್ತನಲ್ಲ, ಸುಹೃಜ್ಜನಾಪ್ತನ ನಿತ್ಯದಲಿ–
ನೆನೆನೆನೆದು ಸುಖಿಸುವ ಭಾಗ್ಯಕರುಣಿಪುದು ॥ ೧೫ ॥

ಪಂಚಭೇದ ಜ್ಞಾನವರುಪು, ವಿರಿಂಚಿ ಜನಕನ ತೋರು ಮನದಲಿ,
ವಾಂಛಿತಪ್ರದ ಒಲುಮೆಯಿಂದಲಿ ದಾಸನೆಂದರಿದು,
ಪಂಚವಕ್ತ್ರನ ತನಯ ಭವದೊಳು ವಂಚಿಸದೆ ಸಂತೈಸು,
ವಿಷಯದಿ ಸಂಚರಿಸದಂದದಲಿ ಮಾಡು ಮನಾದಿ ಕರಣಗಳ ॥ ೧೬ ॥

ಏನು ಬೇಡುವದಿಲ್ಲ ನಿನ್ನ, ಕುಯೋನಿಗಳು ಬರಲಂಜೆ,
ಲಕ್ಷ್ಮೀ ಪ್ರಾಣಪತಿ ತತ್ವೇಶರಿಂದೊಡಗೂಡಿ ಗುಣಕಾರ್ಯ ತಾನೆ ಮಾಡುವನೆಂಬ–
ಈ ಸುಜ್ಞಾನವೇ ಕರುಣಿಪುದೆಮಗೆ,
ಮಹಾನುಭಾವ ಮುಹುರ್ಮುಹು: ಪ್ರಾರ್ಥಿಸುವೆ ಇನಿತೆಂದು ॥ ೧೭ ॥

ನಮೊ ನಮೋ ಗುರುವರ್ಯ ವಿಬುಧೋತ್ತಮ, ವಿವರ್ಜಿತ ನಿದ್ರ,
ಕಲ್ಪದ್ರುಮನೆನಿಪ ಭಜಕರಿಗೆ, ಬಹುಗುಣಭರಿತ ಶುಭ ಚರಿತ,
ಉಮೆಯ ನಂದನ, ಪರಿಹರಿಸಹಂಮಮತೆ ಬುದ್ಧ್ಯಾದಿಂದ್ರಿಯಗಳಾಕ್ರಮಿಸಿ ದಣಿಸುತಲಿಹವು–
ಭವದೊಳಗಾವ ಕಾಲದಲಿ ॥ ೧೮ ॥

ಜಯಜಯತು ವಿಘ್ನೇಶ ತಾಪತ್ರಯ ವಿನಾಶನ, ವಿಶ್ವಮಂಗಳ,
ಜಯಜಯತು ವಿದ್ಯಪ್ರದಾಯಕ, ವೀತಭಯಶೋಕ,
ಜಯಜಯತು ಚಾರ್ವಂಗ, ಕರುಣಾನಯನದಿಂದಲಿ ನೋಡಿ,
ಜನ್ಮಾಮಯ ಮೃತಿಗಳನು ಪರಿಹರಿಸು ಭಕ್ತರಿಗೆ ಭವದೊಳಗೆ ॥ ೧೯ ॥

ಕಡು ಕರುಣಿ ನೀನೆಂದರಿದು ಹೇರೊಡಲ ನಮಿಸುವೆನು ನಿನ್ನಡಿಗೆ,
ಬೆಂಬಿಡದೆ ಪಾಲಿಸು ಪರಮ ಕರುಣಾಸಿಂಧು ಎಂದೆಂದೂ,
ನಡು ನಡುವೆ ಬರುತಿಪ್ಪ ವಿಘ್ನವ ತಡೆದು,
ಭಗವನ್ನಾಮ ಕೀರ್ತನ ನುಡಿದು ನುಡಿಸೆನ್ನಿಂದ ಪ್ರತಿದಿವಸದಲಿ ಮರೆಯದಲೆ ॥ ೨೦ ॥

ಏಕವಿಂಶತಿ ಪದಗಳೆನಿಸುವ ಕೋಕನದ ನವಮಾಲಿಕೆಯ,
ವೈನಾಕಿ ತನಯಾಂತರ್ಗತ ಶ್ರೀಪ್ರಾಣಪತಿಯೆನಿಪ–
ಶ್ರೀಕರ ಜಗನ್ನಾಥ ವಿಠಲ ಸ್ವೀಕರಿಸಿ,
ಸ್ವರ್ಗಾಪವರ್ಗದಿ ತಾ ಕೊಡಲಿ ಸೌಖ್ಯಗಳ ಭಕ್ತರಿಗಾವ ಕಾಲದಲಿ ॥ ೨೧ ॥

॥ ಇತಿ ಶ್ರೀ ವಿಘ್ನೇಶ್ವರ ಸ್ತೋತ್ರ ಸಂಧಿ ಸಂಪೂರ್ಣಂ ॥
॥ ಇತಿ ಶ್ರೀ ಗಣಪತಿ ಸ್ತೋತ್ರ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

## ॥ ೨೯. ಶ್ರೀ ಅಣುತಾರತಮ್ಯ ಸಂಧಿ ॥

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ,
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥

ವಿಷ್ಣುಸರ್ವೋತ್ತಮನು, ಪ್ರಕೃತಿ ಕನಿಷ್ಠಳೆನಿಪಳನಂತ ಗುಣ,
ಪರಮೇಷ್ಠಿ ಪವನರು ಕಡಿಮೆ, ವಾಣೀ ಭಾರತಿಗಳಧಮ,
ವಿಷ್ಣು ವಹನ ಫಣೀಂದ್ರ ಮೃಡರಿಗೆ ಕೃಷ್ಣ ಮಹಿಷಿಯರಧಮರು,
ಇವರೊಳು ಶ್ರೇಷ್ಠಳೆನಿಪಳು ಜಾಂಬವತಿ ಆವೇಶಬಲದಿಂದ ॥ ೧ ॥

ಪ್ಲವಗ ಪನ್ನಗ ಪಾಹಿ ಭೂಷಣ ಯುವತಿಯರು ಸಮ ತಮ್ಮೊಳಗೆ–
ಜಾಂಬವತಿಗಿಂದಲಿ ಕಡಿಮೆ ಇವರು, ಇಂದ್ರಕಾಮರಿಗೆ ಅವರ ಪ್ರಾಣನು,
ಕಡಿಮೆ ಕಾಮನ ಕುವರ ಶಚಿರತಿ ದಕ್ಷ ಗುರುಮನು,
ಪ್ರವಹ ಮಾರುತ ಕೊರತೆಯೆನಿಸುವ ಆರು ಜನರಿಂದ ॥ ೨ ॥

ಯಮದಿವಾಕರ ಚಂದ್ರ ಮಾನವಿ ಸಮರು ಕೋಣಪ ಪ್ರವಹಗಧಮರು,
ದ್ಯುಮಣಿಗಿಂತಲಿ ವರುಣ ನೀಚನು, ನಾರದಾಧಮನು,
ಸುಮನಸಾಸ್ಯ ಪ್ರಸೂತಿ ಭೃಗುಮುನಿ ಸಮರು ನಾರದಗಧಮರು,
ಅತ್ರಿ ಪ್ರಮುಖ ವಿಶ್ವಾಮಿತ್ರ ವೈವಸ್ವತರನಳಗಧಮ ॥ ೩ ॥

ಮಿತ್ರ ತಾರಾ ನಿರಋತಿ ಪ್ರವಹಾ ಪತ್ನಿ ಪ್ರಾವಹಿ ಸಮರು–
ವಿಶ್ವಾಮಿತ್ರಗಿಂತಲಿ ಕೊರತೆ,
ವಿಷ್ವಕ್ಸೇನ ಗಣನಾಥ ವಿತ್ತಪತಿ ಅಶ್ವಿನಿಗಳಧಮರು,
ಮಿತ್ರಮೊದಲಾದವರಿಗಿಂತಲಿ ಬಿತ್ತರಿಪೆನು ಶತಸ್ಥ ಮನುಜರ ವ್ಯೂಹ ನಾಮಗಳ ॥ ೪ ॥

ಮರುತರೊಂಭತ್ತಧಿಕ ನಾಲ್ವತ್ತು-ಎರಡು ಅಶ್ವಿನಿ-ವಿಶ್ವೇದೇವರು ಎರಡಯಿದು-
ಹನ್ನೊಂದು ರುದ್ರರು-ದ್ವಾದಶಾದಿತ್ಯ-
ಗುರು-ಪಿತೃತ್ರಯ-ಅಷ್ಟ ವಸುಗಳು-ಭರತ-ಭಾರತಿ-ಪೃಥ್ವಿ-ಋಭುವು,
ಎಂದರಿವುದಿವರನು ಸೋಮರಸ ಪಾನಾರ್ಹರಹುದೆಂದು ॥ ೫ ॥

ಈ ದಿವೌಕಸರೊಳಗೆ ಉಕ್ತರು ಐದಧಿಕದಶ,
ಉಳಿದ ಎಂಭತ್ತೈದು ಶೇಷರಿಗೆಣೆಯೆನಿಸುವರು ಧನಪ ವಿಘ್ನೇಶಾ,
ಸಾಧು ವೈವಸ್ವತ ಸ್ವಯಂಭುವ ಶ್ರೀದ ತಾಪಸರುಳಿದು,
ಮನು ಏಕಾದಶರು ವಿಘ್ನೇಶಗಿಂತಲಿ ಕೊರತೆಯೆನಿಸುವರು ॥ ೬ ॥

ಚವನನಂದನ ಕವಿ-ಬೃಹಸ್ಪತಿ ಅವರಜ ಉಚಿಥ್ಯಮುನಿ-
ಪಾವಕ-ಧೃವ-ನಹುಷ-ಶಶಿಬಿಂದು-ಪ್ರಿಯವ್ರತನು-ಪ್ರಹ್ಲಾದ-
ಕುವಲಯಪರುಕ್ತೇತರಿಂದಲಿ ಅವರ ರೋಹಿಣಿ-ಶಾಮಲಾ-ಜಾಹ್ನವಿ-
ವಿರಾಟ್ಪರ್ಜನ್ಯ-ಸಂಜ್ಞಾದೇವಿಯರು ಅಧಮ ॥ ೭ ॥

ದ್ಯುನದಿಗಿಂತಲಿ ನೀಚರೆನಿಪರು ಅನಭಿಮಾನಿ ದಿವೌಕಸರು,
ಕೇಚನ ಮುನಿಗಳಿಗೆ ಕಡಿಮೆ, ಸ್ವಾಹಾದೇವಿಗಧಮ ಬುಧ,
ಎನಿಸುವಳುಷಾದೇವಿ ನೀಚಳು, ಶನಿ ಕಡಿಮೆ,
ಕರ್ಮಾಧಿಪತಿ ಸದ್ವಿನುತ ಪುಷ್ಕರ ನೀಚನೆನಿಸುವ ಸೂರ್ಯನಂದನಗೆ ॥ ೮ ॥

ಕೊರತೆಯೆನಿಪರಶೀತಿ ಋಷಿ ಪುಷ್ಕರಗೆ,
ಊರ್ವಶಿ ಮುಖ್ಯ ಶತ ಅಪ್ಸರರು ತುಂಬುರ ಮುಖರು ಆಜಾನಜರೆನಿಸುತಿಹರು,
ಕರೆಸುವುದು ಅನಳಗಣ ನಾಲ್ವತ್ತರೆ ಚತುರ್ದಶದ್ವೈಷ್ಟ ಸಾವಿರ,
ಹರಿ ಮಡದಿಯರು ಸಮರೆನಿಸುವರು ಪಿಂತೆ ಪೇಳ್ದರಿಗೆ ॥ ೯ ॥

ತದವರರನಾಖ್ಯಾತ ಅಪ್ಸರ ಸುದತಿಯರು ಕೃಷ್ಣಾಂಗ ಸಂಗಿಗಳು,
ಅದರ ತರುವಾಯದಲಿ ಚಿರಪಿತರುಗಳು,
ಇವರಿಂದ ತ್ರಿದಶ ಗಂಧರ್ವಗಣ, ಇವರಿಂದಧಮ ನರ ಗಂಧರ್ವರು,
ಇವರಿಂದುದಧಿ ಮೇಖಳಪತಿಗಳಧಮರು ನೂರು ಗುಣದಿಂದ ॥ ೧೦ ॥

ಪೃಥ್ವಿಪತಿಗಳಿಗಿಂದ ಶತ ಮನುಜೋತ್ತಮರು ಕಡಿಮೆನಿಪರು,
ಇವರಿಂದುತ್ತರೋತ್ತರ ನೂರು ಗುಣದಿಂದಧಿಕರಾದವರ-
ನಿತ್ಯದಲಿ ಚಿಂತಿಸುತ ನಮಿಸುತ ಭೃತ್ಯನಾನಹುದೆಂಬ-
ಭಕ್ತರ ಚಿತ್ತದಲಿ ನೆಲೆಗೊಂಡು ಕರುಣಿಪರಖಿಳ ಸೌಖ್ಯಗಳ ॥ ೧೧ ॥

ದ್ರುಮಲತಾ ತೃಣ ಗುಲ್ಮ ಜೀವರು ಕ್ರಮದಿ ನೀಚರು,
ಇವರಿಗಿಂತಾಧಮರೆನಿಸುವರು ನಿತ್ಯಬದ್ಧರಿಗಿಂತಲಜ್ಞಾನಿ,
ತಮಸಿಗ್ಯೋಗ್ಯರ ಭೃತ್ಯರಧಮರು, ಅಮರುಷಾದ್ಯಭಿಮಾನಿ ದೈತ್ಯರು,
ನಮುಚಿ ಮೊದಲಾದವರಿಗಿಂತಲಿ ವಿಪ್ರಚಿತ ನೀಚ ॥ ೧೨ ॥

ಅಲಕುಮಿಯು ತಾ ನೀಚಳೆನಿಪಳು, ಕಲಿ ಪರಮ ನೀಚತಮ,
ಅವನಿಂದುಳಿದ ಪಾಪಿಗಳಿಲ್ಲ ನೋಡಲು ಈ ಜಗತ್ರಯದಿ,
ಮಲ ವಿಸರ್ಜನ ಕಾಲದಲಿ–ಕತ್ತಲೆಯೊಳಗೆ–
ಕಲ್ಮಷ ಕುಮಾರ್ಗ ಸ್ಥಳಗಳಲಿ ಚಿಂತನೆಯ ಮಾಳ್ಪುದು ಬಲ್ಲವರು ನಿತ್ಯ ॥ ೧೩ ॥

ಸತ್ವಜೀವರ ಮಾನಿ ಬ್ರಹ್ಮನು, ನಿತ್ಯ ಬದ್ಧರೊಳಗೆ ಪುರಂಜನ,
ದೈತ್ಯ ಸಮುದಾಯಾಧಿಪತಿ ಕಲಿಯೆನಿಪ,
ಪವಮಾನ ನಿತ್ಯದಲಿ ಅವರೋಳಗೆ ಕರ್ಮ ಪ್ರವರ್ತಕನು ತಾನಾಗಿ,
ಶ್ರೀಪುರುಷೋತ್ತಮನ ಸಂಪ್ರೀತಿಗೋಸುಗ ಮಾಡಿ ಮಾಡಿಸುವ ॥ ೧೪ ॥

ಪ್ರಾಣದೇವನು ತ್ರಿವಿಧರೊಳಗೆ ಪ್ರವೀಣ ತಾನೆಂದೆನಿಸಿ,
ಅಧಿಕಾರಾನುಸಾರದಿ ಕರ್ಮಗಳ ತಾ ಮಾಡಿ ಮಾಡಿಸುವ,
ಜ್ಞಾನ ಭಕ್ತಿ ಸುರರ್ಗೆ, ಮಿಶ್ರ ಜ್ಞಾನ ಮಧ್ಯಮ ಜೀವರಿಗೆ,
ಅಜ್ಞಾನ ಮೋಹ ದ್ವೇಷಗಳ ದೈತ್ಯರಿಗೆ ಕೊಡುತಿಪ್ಪ ॥ ೧೫ ॥

ದೇವ ದೈತ್ಯರ ತಾರತಮ್ಯವ ಈ ವಿಧದಿ ತಿಳಿದೆಲ್ಲರೊಳು,
ಲಕ್ಷ್ಮೀವರನು ಸರ್ವೋತ್ತಮನು ಎಂದರಿದು ನಿತ್ಯದಲಿ ಸೇವಿಸುವ–
ಭಕ್ತರಿಗೊಲಿದು ಸುಖವೀವ ಸರ್ವತ್ರದಲಿ ಸುಖಮಯ,
ಶ್ರೀವಿರಿಂಚಾದ್ಯಮರವಂದಿತ ಜಗನ್ನಾಥ ವಿಠಲನು ॥ ೧೬ ॥

॥ ಇತಿ ಶ್ರೀ ಅಣುತಾರತಮ್ಯ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

## ॥ ೩೦. ಶ್ರೀ ದೈತ್ಯತಾರತಮ್ಯ ಸಂಧಿ ॥

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ,
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥

ಶ್ರೀಶ ಮುಕ್ತಾಮುಕ್ತ ಸುರವರ ವಾಸುದೇವಗೆ ಭಕ್ತಿಯಲಿ–
ಕಮಲಾಸನನು ಪೇಳಿದನು ದೈತ್ಯಸ್ವಭಾವಗುಣಗಳನು ॥

ಎನಗೆ ನಿನ್ನಲಿ ಭಕ್ತಿ ಜ್ಞಾನಗಳೆನಿತಿಹವೊ ಪ್ರಾಣನಲಿ ತಿಳಿಯದೆ,
ಹನುಮದಾದ್ಯವತಾರಗಳ ಭೇದಗಳ ಪೇಳುವವ ದನುಜ,
ಘೋರಾಂಧಂತಮಸಿಗ್ಯೋಗ್ಯನು ನಸಂಶಯ,
ನಿನ್ನ ಬೈವರ ಕೊನೆಯ ನಾಲಿಗೆ ಪಿಡಿದು ಛೇದಿಪೆನೆಂದನಬ್ಜ ಭವ ॥ ೧ ॥

ಜ್ಞಾನ ಬಲ ಸುಖ ಪೂರ್ಣ ವ್ಯಾಪ್ತಗೆ ಹೀನ ಗುಣನೆಂಬುವನು,
ಈಶ್ವರ ತಾನೆಯೆಂಬುವ, ಸಚ್ಚಿದಾನಂದಾತ್ಮಗುತ್ಪತ್ತಿ,
ಶ್ರೀನಿತಂಬಿನಿಗೆ–ಈಶಗೆ ವಿಯೋಗಾನು ಚಿಂತನೆ,
ಛೇದ ಭೇದ ವಿಹೀನ ದೇಹಗೆ ಶಸ್ತ್ರಗಳ ಭಯ ಪೇಳುವವ ದೈತ್ಯ ॥ ೨ ॥

ಲೇಶ ಭಯ ಶೋಕಾದಿ ಶೂನ್ಯಗೆ ಕ್ಲೇಶಗಳು ಪೇಳುವವ,
ರಾಮ ವ್ಯಾಸ ರೂಪಂಗಳಿಗೆ ಋಷಿ ವಿಪ್ರತ್ವ ಪೇಳುವವ,
ದಾಶರಥಿ ಕೃಷ್ಣಾದಿ ರೂಪಕೆ ಕೇಶಖಂಡನೆ ಪೇಳ್ವ,
ಮಕ್ಕಳಿಗೋಸುಗ ಶಿವಾರ್ಚನೆಯ ಮಾಡಿದನೆಂಬುವವ ದೈತ್ಯ ॥ ೩ ॥

ಪಾಪ ಪರಿಹಾರಾರ್ಥ ರಾಮ ಉಮಾಪತಿಯ ನಿರ್ಮಿಸಿದ,
ಭಗವದ್ರೂಪರೂಪಕೆ ಭೇದ ಚಿಂತನೆ ಮಾಳ್ಪ ಮಾನವನು,
ಆಪಗಳು ಸತ್ತೀರ್ಥ ಗುರು ಮಾತಾ ಪಿತರ ಪ್ರಭು ಪ್ರತಿಮ ಭೂತ ದಯಾಪರರ,
ಕಂಡವರೆ ದೇವರು ಎಂಬುವನೆ ದೈತ್ಯ ॥ ೪ ॥

ಸುಂದರ ಸ್ವಯಂವ್ಯಕ್ತವು ಚಿದಾನಂದ ರೂಪಗಳೆಂಬುವನು,
ನರರಿಂದ ನಿರ್ಮಿತ ಈಶ್ವರಗೆ ಅಭಿನಮಿಸುತಿಹ ನರನು,
ಕಂದುಗೊರಳ ದಿವಾಕರನು ಹರಿಯೊಂದೆ,
ಸೂರ್ಯ ಸುರೋತ್ತಮ ಜಗದ್ವಂದ್ಯನೆಂಬುವ, ವಿಷ್ಣು ದೂಷಣೆ ಮಾಡುವವ ದೈತ್ಯ ॥ ೫ ॥

ನೇಮದಿಂದಶ್ವತ್ಥ ತುಲಸೀ ಸೋಮಧರನಲಿ ವಿಮಲ ಶಾಲಿಗ್ರಾಮಗಳನಿಟ್ಟು,
ಅಭಿನಮಿಪ ನರ ಮುಕ್ತಿಯೋಗ್ಯ ಸದಾ,
ಭೂಮಿಯೊಳು ಧರ್ಮಾರ್ಥ ಮುಕ್ತಿ ಸುಕಾಮಪೇಕ್ಷೆಗಳಿಂದ–
ಶಾಲಿಗ್ರಾಮಗಳ ವ್ಯತಿರಿಕ್ತ ವಂದಿಸೆ ದು:ಖವೈದುವನು ॥ ೬ ॥

ವಿತತ ಮಹಿಮನ ಬಿಟ್ಟು ಸುರರಿಗೆ ಪೃಥಕು ವಂದನೆ ಮಾಳ್ಪ ಮಾನವ–
ದಿತಿಜನೇ ಸರಿ ಹರಿಯು ತಾ ಸಂಸ್ಥಿತ ನೆನಿಸನಲ್ಲಿ,
ಚತುರ ಮುಖ ಮೊದಲಾದಖಿಳ ದೇವತೆಗಳೊಳಗಿಹನೆಂದು–
ಲಕ್ಷ್ಮೀಪತಿಗೆ ವಂದಿಸೆ ಒಂದರಕ್ಷಣ ಬಿಟ್ಟಗಲನವರ ॥ ೭ ॥

ಶೈವ ಶೂದ್ರ ಕರಾರ್ಚಿತ ಮಹಾದೇವ ವಾಯು ಹರಿ ಪ್ರತಿಮೆ,
ವೃಂದಾವನದಿ ಮಾಸದ್ವಯದೊಳಿಹ ತುಲಸಿ, ಅಪ್ರಸವ ಗೋ,
ವಿವಾಹ ವರ್ಜಿತಾಶ್ವತ್ಥಾ ವಿಟಪಿಗಳ–
ಭಕ್ತಿ ಪೂರ್ವಕಸೇವಿಸುವ ನರ ದೈತ್ಯ ಶಾಶ್ವತ ದು:ಖವೈದುವನು ॥ ೮ ॥

ಕಮಲ ಸಂಭವ ಮುಖ್ಯ ಮನುಜೋತ್ತಮರ ಪರ್ಯಂತರದಿ ಮುಕ್ತರು,
ಸಮ ಶತಾಯುಷ್ಯಳ್ಳವನು ಕಲಿ ಬ್ರಹ್ಮನೋಪಾದಿ,
ಕ್ರಮದಿ ನೀಚರು ದೈತ್ಯರು ನರಾಧಮರ ವಿಡಿದು,
ಕುಲಕ್ಷ್ಮಿ ಕಲಿ ಅನುಪಮರೆನಿಸುವರು ಅಸುರರೊಳು ದ್ವೇಷಾದಿ ಗುಣದಿಂದ ॥ ೯ ॥

ವನಜ ಸಂಭವನಬ್ದ ಶತ ಒಬ್ಬನೆ ಮಹಾಕಲಿಶಬ್ದ ವಾಚ್ಯನು,
ದಿನ ದಿನಗಳಲಿ ಬೀಳ್ವರಂಧಂತಮದಿ ಕಲಿಮಾರ್ಗ,
ದನುಜರೆಲ್ಲರ ಪ್ರತೀಕ್ಷಿಸುತ ಬ್ರಹ್ಮನ ಶತಾಬ್ದಾಂತದಲಿ,
ಲಿಂಗವು ಅನಿಲನ ಗದಾ ಪ್ರಹಾರದಿಂದಲಿ ಭಂಗವೈದುವದು ॥ ೧೦ ॥

ಮಾರುತನ ಗದೆಯಿಂದ ಲಿಂಗ ಶರೀರ ಪೋದಾನಂತರ ತಮೋದ್ವಾರವೈದಿ–
ಸ್ವರೂಪ ದು:ಖಗಳನುಭವಿಸುತಿಹರು,
ವೈರ ಹರಿಭಕ್ತರಲಿ ಹರಿಯಲಿ ತಾರತಮ್ಯದಲಿರುತಿಹುದು ಸಂಸಾರದಲ್ಲಿ,
ತಮಸ್ಸಿನಲಿ ಅತ್ಯಧಿಕ ಕಲಿಯಲ್ಲಿ ॥ ೧೧ ॥

ಜ್ಞಾನವೆಂಬುದೇ ಮಿಥ್ಯ, ಅಸಮೀಚೀನ ದು:ಖ ತರಂಗವೆ–
ಸಮೀಚೀನ ಬುದ್ಧಿ ನಿರಂತರದಿ ಕಲಿಗಿಹುದು,
ದೈತ್ಯರೊಳು ಹೀನಳೆನಿಪಳು ಶತಗುಣದಿ, ಕಲಿಮಾನಿನಿಗೆ ಶತ ವಿಪ್ರಚಿತ್ತಿಗೆ,
ಊನ ಶತಗುಣ ಕಾಲನೇಮಿಯೆ ಕಂಸನೆನಿಸಿದನು ॥ ೧೨ ॥

ಕಾಲನೇಮಿಗೆ ಪಂಚಗುಣದಿಂಕೀಳು ಮಧುಕೈಟಭರು,
ಜನ್ಮವ ತಾಳಿ ಇಳೆಯೊಳು ಹಂಸಡಿಭಿಕಾಹ್ವಯದಿ ಕರೆಸಿದರು,
ಐಳ ನಾಮಕ ವಿಪ್ರಚಿತ್ತ ಸಮ ಆಳುಯೆನಿಪ,
ಹಿರಣ್ಯಕಶ್ಯಪು ಶೂಲ ಪಾಣೀ ಭಕ್ತ ನರಕಗೆ ಶತಗುಣಾಧಮನು ॥ ೧೩ ॥

ಗುಣಗಳತ್ರಯ ನೀಚರೆನಿಸುವ ಕನಕಕಸಿಪುಗೆ ಹಾಟಕಾಂಬಕಗೆ,
ಎಣೆಯೆನಿಪ ಮಣಿಮಂತಗಿಂತಲಿ ಕಿಂಚಿತ್–ಊನ ಬಕ,
ದನುಜವರ ತಾರಕನು ವಿಂಶತಿ ಗುಣದಿ ನೀಚನು,
ಲೋಕ ಕಂಟಕನೆನಿಪ ಶಂಬರ ತಾರಕಾಸುರಗಧಮ ಷಡ್ಗುಣದಿ ॥ ೧೪ ॥

ಸರಿಯೆನಿಸುವನು ಸಾಲ್ವನಿಗೆ ಸಂಕರನು, ಅಧಮನು ಶತಗುಣದಿ ಶಂಬರಗೆ,
ಷಡ್ಗುಣ ನೀಚನೆನಿಪ ಹಿಡಿಂಬಕಾ–ಬಾಣ–
ಅಸುರನು ದ್ವಾಪರ ಕೀಚಕನು ನಾಲ್ವರು ಸಮರು,
ದ್ವಾಪರನೆ ಶಕುನೀ ಕರೆಸಿದನು ಕೌರವಗೆ ಸಹೋದರಮಾವನಹುದೆಂದು ॥ ೧೫ ॥

ನಮುಚಿ ಇಲ್ವಲ ಪಾಕನಾಮಕ ಸಮರು, ಬಾಣಾದ್ಯರಿಗೆ ದಶಗುಣ ನಮುಚಿ ನೀಚನು,
ನೂರುಗುಣದಿಂದ ಅಧಮ ವಾತಾಪಿ,
ಕುಮತಿಧೇನುಕ ನೂರುಗುಣದಿಂದ ಅಮರರಿಪು ವಾತಾಪಿಗಧಮನು,
ವಮನಧೇನುಕಗಿಂದಲಿ ಅರ್ಧ ಗುಣಾಧಮನು ಕೇಶಿ ॥ ೧೬ ॥

ಮತ್ತೆ ಕೇಶಿನಾಮಕ ತೃಣಾವರ್ತ ಸಮ, ಲವಣಾಸುರನು ಒಂಭತ್ತು ನೀಚ,
ಅರಿಷ್ಟ ನಾಮಕ ಪಂಚಗುಣದಿಂದ,
ದೈತ್ಯಸತ್ತಮ ಹಂಸ ಡಿಭಿಕ ಪ್ರಮತ್ತ–ವೇನನು ಪೌಂಡ್ರಕನು,
ಒಂಭತ್ತು ಗುಣದಿಂದಧಮ ಮೂವರು ಲವಣನಾಮಕಗೆ ॥ ೧೭ ॥

ಈಶನೇನಾನೆಂಬ ಖಳ ದುಶ್ಯಾಸನಾ ವೃಷಸೇನ–
ದೈತ್ಯಾಗ್ರೇಸರ ಜರಾಸಂಧ ಸಮ ಪಾಪಿಗಳೊಳತ್ಯಧಿಕ,
ಕಂಸ ಕೂಪ ವಿಕರ್ಣ ಸರಿ ರುಗ್ಮೀಶತಾಧಮ,
ರುಗ್ಮಿಗಿಂತ ಮಹಾಸುರನು ಶತಧನ್ವಿ ಕಿರ್ಮಿರೀರರು ಶತಾಧಮರು ॥ ೧೮ ॥

ಮದಿರಪಾನೀ ದೈತ್ಯ ಗಣದೊಳಗಧಮರೆನಿಪರು ಕಾಲಿಕೇಯರು,
ಅಧಿಕರಿಗೆ ಸಮರಹರು ದೇವಾವೇಶಬಲದಿಂದ,
ವದನ ಪಾಣೀ ಪಾದ ಶ್ರೋತ್ರಿಯ ಗುದ ಉಪಸ್ಥ ಘ್ರಾಣ ತ್ವಕ್ ರಸನಕೆ ಅಧಿಪದೈತ್ಯರು–
ನೀಚರೆನಿಪರು ಕಾಲಿಕೇಯರಿಗೆ ॥ ೧೯ ॥

ಜ್ಞಾನ ಕರ್ಮೇಂದ್ರಿಯಗಳಿಗೆ ಅಭಿಮಾನಿ ಕಲ್ಯಾದ್ಯಖಿಳ ದೈತ್ಯರು–
ಹೀನಕರ್ಮವ ಮಾಡಿ ಮಾಡಿಸುತಿಹರು ಸರ್ವರೊಳು,
ವಾಣಿ ಭಾರತಿ ಕಮಲಭವ ಪವಮಾನರು ಇವರಚ್ಛಿನ್ನ ಭಕ್ತರು,
ಪ್ರಾಣ ಅಸುರಾವೇಶರಹಿತರು ಆಖಣಾಶ್ಮಸಮ ॥ ೨೦ ॥

ಹುತವಹಾಕ್ಷಾದ್ಯಮರರೆಲ್ಲರು ಯುತರು ಕಲ್ಯಾವೇಶ,
ವಿಧಿ ಮಾರುತಿ ಸರಸ್ವತಿ ಭಾರತಿಯರ ಅವತಾರದೊಳಗಿಲ್ಲ,
ಕೃತಪುಟಾಂಜಲಿಯಿಂದ ತನ್ನಯ ಪಿತನ ಸಮ್ಮುಖದಲ್ಲಿ ನಿಂದು–
ಆನತಿಸಿ ಬಿನ್ನೈಸಿದನು ಯನ್ನೊಳು ಕೃಪೆಯ ಮಾಡೆಂದು ॥ ೨೧ ॥

ದ್ವೇಷಿದೈತ್ಯರ ತಾರತಮ್ಯವು ದೂಷಣೆಯು ಭೂಷಣಗಳು ಎನ್ನದೆ–
ದೋಷವೆಂಬುವ ದ್ವೇಷಿ ನಿಶ್ಚಯ,
ಇವನ ನೋಡಲ್ಕೆ ಕ್ಲೇಶಗಳನೈದುವನು ಬಹುವಿಧ, ಸಂಶಯವು ಪಡಸಲ್ಲ,
ವೇದವ್ಯಾಸ ಗರುಡ ಪುರಾಣದಲಿ ಪೇಳಿದನು ಋಷಿಗಳಿಗೆ ॥ ೨೨ ॥

ಜಾಲಿನೆಗ್ಗಿಲು ಕ್ಷುದ್ರ ಶಿಲೆ ಬರಿಗಾಲ ಪುರುಷನ ಬಾಧಿಪವು,
ಚರ್ಮೊಳಿಗೆಯ ಮೆಟ್ಟಿದವಗುಂಟೇ ಕಂಟಕಗಳ ಭಯ,
ಚೇಳು ಸರ್ಪವ ಕೊಂದ ವಾರ್ತೆಯ ಕೇಳಿ ಮೋದಿಪರಿಗಿಲ್ಲವಘ,
ಯಮನಾಳುಗಳ ಭಯವಿಲ್ಲ ದೈತ್ಯರ ನಿಂದಿಸುವ ನರಗೆ ॥ ೨೩ ॥

ಪುಣ್ಯಕರ್ಮವ ಪುಷ್ಕರಾದಿ ಹಿರಣ್ಯ ಗರ್ಭಾಂತರ್ಗತ–
ಬ್ರಹ್ಮಣ್ಯ ದೇವನಿಗರ್ಪಿಸುತಲಿರು,
ಪಾಪ ಕರ್ಮಗಳ ಜನ್ಯ ದು:ಖವ ಕಲಿಮುಖಾದ್ಯರಿಗುಣ್ಣಲೀವನು,
ಸಕಲಲೋಕ ಶರಣ್ಯ ಶಾಶ್ವತ ಮಿಶ್ರ ಜನರಿಗೆ ಮಿಶ್ರಫಲವೀವ ॥ ೨೪ ॥

ತ್ರಿವಿಧ ಗುಣಗಳ ಮಾನಿ ಶ್ರೀಭಾರ್ಗವಿರಮಣ,
ಗುಣಗುಣಿಗಳೊಳಗವರವರ ಯೋಗ್ಯತೆ ಕರ್ಮಗಳನನುಸರಿಸಿ ಕರ್ಮಫಲ–
ಸ್ವವಶರಾದಮರಾಸುರರ ಗಣಕವಧಿಯಿಲ್ಲದೆ ಕೊಡುವ,
ದೇವ ಪ್ರವರವರ ಜಗನ್ನಾಥ ವಿಠಲ ವಿಶ್ವವ್ಯಾಪಕನು ॥ ೨೫ ॥

॥ ಇತಿ ಶ್ರೀ ದೈತ್ಯತಾರತಮ್ಯ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

## ॥ ೩೧. ಶ್ರೀ ನೈವೇದ್ಯಪ್ರಕರಣ ಸಂಧಿ ॥

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ,
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥

ಲೆಕ್ಕಿಸದೆ ಲಕುಮಿಯನು ಬೊಮ್ಮನ ಪೊಕ್ಕಳಿಂದಲಿ ಪಡೆದ,
ಪೊಸ ಪೊಂಬಕ್ಕಿದೇರನು ಪಡೆದವಯವಗಳಿಂದ ದಿವಿಜರನಾ,
ಮಕ್ಕಳಂದದಿ ಪೊರೆವ ಸರ್ವದ ರಕ್ಕಸಾಂತಕ,
ರಣದೊಳಗೆ ನಿರ್ದು:ಖ ಸುಖಮಯ ಕಾಯ್ದ ಪಾರ್ಥನ ಸೂತನೆಂದೆನಿಸಿ ॥ ೧ ॥

ದೋಷಗಂಧವಿದೂರ, ನಾನಾ ವೇಷಧಾರಿ, ವಿಚಿತ್ರ ಕರ್ಮ, ಮನೀಷಿ,
ಮಾಯಾರಮಣ, ಮಧ್ವಾಂತ: ಕರಣರೂಢ,
ಶೇಷಶಾಯಿ, ಶರಣ್ಯ, ಕೌಸ್ತುಭ ಭೂಷಣ ಸುಕಂಧರ,
ಸದಾ ಸಂತೋಷ ಬಲ ಸೌಂದರ್ಯಸಾರನ ಮಹಿಮೆಗೇನೆಂಬೆ ॥ ೨ ॥

ಸಾಶನಾನಶನೇ ಅಭೀ ಯೆಂಬೀ ಶ್ರುತಿ ಪ್ರತಿಪಾದ್ಯನೆನಿಸುವ–
ಕೇಶವನ ರೂಪದ್ವಯವ ಚಿದ್ದೇಹದೊಳಹೊರಗೆ– ॥
ಬೇಸರದೆ ಸದ್ಭಕ್ತಿಯಿಂದ ಉಪಾಸನೆಯ ಗೈಯುತಲಿ ಬುಧರು,
ಹುತಾಶನನ ವೋಲಿಪ್ಪನೆಂದನವರತ ತುತಿಸುವರು ॥ ೩ ॥

ಸಕಲ ಸದ್ಗುಣ ಪೂರ್ಣ, ಜನ್ಮಾದ್ಯಖಿಳ ದೋಷವಿದೂರ,
ಪ್ರಕಟಾಪ್ರಕಟ, ಸದ್ವ್ಯಾಪಾರಿ, ಗತ ಸಂಸಾರಿ ಕಂಸಾರಿ,
ನಕುಲ ನಾನಾರೂಪ ನೀಯಾಮಕ ನಿಯಮ್ಯ ನಿರಾಮಯ,
ರವಿಪ್ರಕರ ಸನ್ನಿಭ, ಪ್ರಭು ಸದಾ ಮಾಂ ಪಾಹಿ ಪರಮಾತ್ಮ ॥ ೪ ॥

ಚೇತನಾ ಚೇತನ ಜಗತ್ತಿನೊಳಾತನನು ತಾನಾಗಿ ಲಕ್ಷ್ಮೀನಾಥ–
ಸರ್ವರೊಳಿಪ್ಪ ತತ್ತದ್ರೂಪಗಳ ಧರಿಸಿ,
ಜಾತಿಕಾರನ ತೆರದಿ ಯೆಲ್ಲರ ಮಾತಿನೊಳಗಿದ್ದು,
ಅಖಿಳ ಕರ್ಮವ ತಾ ತಿಳಿಸಿಕೊಳ್ಳದಲೆ ಮಾಡಿಸಿ ನೋಡಿ ನಗುತಿಪ್ಪ ॥ ೫ ॥

ವೀತಭಯ, ವಿಜ್ಞಾನ ದಾಯಕ, ಭೂತ ಭವ್ಯ ಭವತ್ಪ್ರಭು,
ಖಳಾರಾತಿ, ಖಗವರ ವಹನ, ಕಮಲಾಕಾಂತ ನಿಶ್ಚಿಂತ,
ಮಾತರಿಶ್ವಪ್ರಿಯ, ಪುರಾತನ, ಪೂತನಾ ಪ್ರಾಣಾಪಹಾರಿ,
ವಿಧಾತೃಜನಕ, ವಿಪಶ್ಚಿತ ಜನಪ್ರಿಯ, ಕವಿಗೇಯಾ ॥ ೬ ॥

ದುಷ್ಟಜನ ಸಂಹಾರಿ, ಸರ್ವೋತ್ಕೃಷ್ಟ ಮಹಿಮ, ಸಮೀರನುತ,
ಸಕಲೇಷ್ಟದಾಯಕ, ಸ್ವರತ, ಸುಖಮಯ, ಮಮ ಕುಲಸ್ವಾಮಿ,
ಹೃಷ್ಟ ಪುಷ್ಟ ಕನಿಷ್ಠ, ಸೃಷ್ಟ್ಯಾದ್ಯಷ್ಟ ಕರ್ತ,
ಕರೀಂದ್ರ ವರದ, ಯಥೇಷ್ಟತನು, ಉನ್ನತ ಸುಕರ್ಮಾ, ನಮಿಪೆ ನನವರತ ॥ ೭ ॥

ಪಾಕಶಾಸನ ಪೂಜ್ಯಚರಣ, ಪಿನಾಕಿ ಸನ್ನುತ ಮಹಿಮ,
ಸೀತಾ ಶೋಕನಾಶನ, ಸುಲಭ, ಸುಮುಖ, ಸುವರ್ಣವರ್ಣ ಸುಖಿ,
ಮಾಕಳತ್ರ, ಮನೀಷಿ, ಮಧುರಿಪು, ಏಕಮೇವಾದ್ವಿತಿಯ ರೂಪ,
ಪ್ರತೀಕ, ದೇವ ಗಣಾಂತರಾತ್ಮಕ, ಪಾಲಿಸುವುದೆಮ್ಮ ॥ ೮ ॥

ಅಪ್ರಮೇಯಾನಂತ ರೂಪ, ಸದಾ ಪ್ರಸನ್ನ ಮುಖಾಬ್ಜ,
ಮುಕ್ತಿ ಸುಖ ಪ್ರದಾಯಕ, ಸುಮನಸಾರಾಧಿತ ಪದಾಂಭೋಜ,
ಸ್ವಪ್ರಕಾಶ, ಸ್ವತಂತ್ರ, ಸರ್ವಗ, ಕ್ಷಿಪ್ರ ಫಲದಾಯಕ, ಕ್ಷಿತೀಶ,
ಯದುಪ್ರವೀರ, ವಿತರ್ಕ್ಯ, ವಿಶ್ವ ಸುತೈಜಸ ಪ್ರಾಜ್ಞ ॥ ೯ ॥

ಗಾಳಿ ನಡೆವಂದದಲಿ ನೀಲಘನಾಳಿ ವರ್ತಿಸುವಂತೆ,
ಬ್ರಹ್ಮ ತ್ರಿಶೂಲಧರ ಶಕ್ರಾರ್ಕ ಮೊದಲಾದಖಿಳ ದೇವಗಣ,
ಕಾಲಕರ್ಮ ಗುಣಾಭಿಮಾನಿ ಮಹಾಲಕುಮಿ ಅನುಸರಿಸಿ ನಡೆವರು,
ಮೂಲಕಾರಣ ಮುಕ್ತಿದಾಯಕನು ಶ್ರೀಹರಿ ಯೆನಿಸಿಕೊಂಬ ॥ ೧೦ ॥

ವೋಡ ಕೈಬೀಸಣಿಕೆಯಿಂದಲಿ ಓಡಿಸುವೆನೆಂಬನ ಪ್ರಯತ್ನವು ಕೂಡುವದೆ ಕಲ್ಪಾಂತಕಾದರು,
ಲಕುಮಿವಲ್ಲಭನು ಜೋಡು ಕರ್ಮವ ಜೀವರೊಳು,
ತಾ ಮಾಡಿ ಮಾಡಿಸಿ ಫಲಗಳುಣಿಸುವ,
ಪ್ರೌಢರಾದವರಿವನ ಭಜಿಸಿ ಭವಾಬ್ಧಿ ದಾಟುವರು ॥ ೧೧ ॥

ಕ್ಲೇಶ ಮೋಹಾಜ್ಞಾನ ದೋಷ ವಿನಾಶಕ,
ವಿರಿಂಚಾಂಡದೊಳಗಾಕಾಶದೋಪಾದಿಯಲಿ ತುಂಬಿಹ ಯೆಲ್ಲ ಕಾಲದಲಿ,
ಘಾಸಿಗೊಳಿಸದೆ ತನ್ನವರ ಅನಾಯಾಸ ಸಂರಕ್ಷಿಸುವ,
ಮಹಕರುಣಾಸಮುದ್ರ, ಪ್ರಸನ್ನ ವದನಾಂಭೋಜ, ಸುರರಾಜ ವೈರಾಜ ॥ ೧೨ ॥

ಕನ್ನಡಿಯ ಕೈವಿಡಿದು ನೋಳ್ಪನ ಕಣ್ಣುಗಳು ಕಂಡಲ್ಲಿಗೆರಗದೆ–
ತನ್ನ ಪ್ರತಿಬಿಂಬವನೆ ಕಾಂಬುವ ದರ್ಪಣವ ಬಿಟ್ಟು,
ಧನ್ಯರಿಳೆಯೊಳಗೆಲ್ಲ ಕಡೆಯಲಿ ನಿನ್ನ ರೂಪವ ನೋಡಿ ಸುಖಿಸುತ ಸನ್ನುತಿಸುತ,
ಆನಂದ ವಾರಿಧಿಯೊಳಗೆ ಮುಳುಗಿಹರು ॥ ೧೩ ॥

ಅನ್ನಮಾನಿ ಶಶಾಂಕನೊಳು ಕಾರುಣ್ಯಸಾಗರ ಕೇಶವನು,
ಪರಮಾನ್ನದೊಳು ಭಾರತಿಯು ನಾರಾಯಣನು,
ಭಕ್ಷ್ಯದೊಳು ಸೊನ್ನಗದಿರನು ಮಾಧವನು,
ಶ್ರುತಿ ಸನ್ನುತ ಶ್ರೀಲಕ್ಷ್ಮಿ ಘೃತದೊಳು ಮಾನ್ಯ ಗೋವಿಂದಾಭಿಧನು ಇರುತಿಪ್ಪೆಯೆಂದೆಂದು ॥ ೧೪ ॥

ಕ್ಷೀರಮಾನಿ ಸರಸ್ವತೀ ಜಗತ್ಸಾರ ವಿಷ್ಣುವ ಚಿಂತಿಸುವುದು,
ಸರೋರುಹಾಸನ ಮಂಡಿಗೆಯೊಳಿರುತಿಪ್ಪ ಮಧುವೈರಿ,
ಮಾರುತನು ನವನೀತದೊಳು ಸಂಪ್ರೇರಕ ತ್ರಿವಿಕ್ರಮನು,
ದಧಿಯೊಳು ವಾರಿನಿಧಿ ಚಂದ್ರಮರೊಳಗೆ ಇರುತಿಪ್ಪ ವಾಮನನು ॥ ೧೫ ॥

ಗರುಡಸೂಪಕೆ ಮಾನಿ ಶ್ರೀ ಶ್ರೀಧರನ ಮೂರುತಿ,
ಪತ್ರಶಾಖಕೆ ವರನೆನಿಪ ಮಿತ್ರಾಖ್ಯ ಸೂರ್ಯನು ಹೃಶೀಕಪನ ಮೂರ್ತಿ,
ಉರಗರಾಜನು ಫಲಸುಶಾಖಕೆ ವರನೆನಿಸುವನು-
ಪದ್ಮನಾಭನ ಸ್ಮರಿಸಿ ಭುಂಜಿಸುತಿಹರು ಬಲ್ಲವರೆಲ್ಲ ಕಾಲದಲಿ ॥ ೧೬ ॥

ಗೌರಿ ಸರ್ವಾಮ್ಲಸ್ಥಳೆನಿಪಳು ಶೌರಿ ದಾಮೋದರನ ತಿಳಿವುದು,
ಗೌರಿಪ ಅನಾಮ್ಲಸ್ಥ ಸಂಕರುಷಣನ ಚಿಂತಿಪುದು,
ಸಾರ ಶರ್ಕರ ಗುಡದೊಳಗೆ ವೃತ್ರಾರಿ ಇರುತಿಹ-
ವಾಸುದೇವನ ಸೂರಿಗಳು ಧೇನಿಪರು ಪರಮಾದರದಿ ಸರ್ವತ್ರ ॥ ೧೭ ॥

ಸ್ಮರಿಸು ವಾಚಸ್ಪತಿಯು ಸೋಪಸ್ಕರದೊಳಗೆ ಪ್ರದ್ಯುಮ್ನನಿಪ್ಪನು,
ನಿರಯಪತಿ ಯಮಧರ್ಮ ಕಟುದ್ರವ್ಯದೊಳಗನಿರುದ್ಧ,
ಸರಷಪ ಶ್ರೀ ರಾಮಠ ಏಳದಿ ಸ್ಮರಣ ಶ್ರೀಪುರುಷೋತ್ತಮನ-
ಕರ್ಪೂರದಿ ಚಿಂತಿಸಿ ಪೂಜಿಸುತಲಿರು ಪರಮ ಭಕುತಿಯಲಿ ॥ ೧೮ ॥

ನಾಲಿಗಿಂದಲಿ ಸ್ವೀಕರಿಪ ರಸಪಾಲು ಮೊದಲಾದದರೊಳಗೆ-
ಘೃತ ತೈಲ ಪಕ್ವ ಪದಾರ್ಥದೊಳಗಿಹ ಚಂದ್ರನಂದನನ-
ಪಾಲಿಸುವಧೋಕ್ಷಜನ ಚಿಂತಿಸು,
ಸ್ಥೂಲ ಕೂಷ್ಮಾಂಡ ತಿಲ ಮಾಷಜ ಈ ಲಲಿತ ಭಕ್ಷ್ಯದೊಳು ದಕ್ಷನು ಲಕ್ಷ್ಮೀನರಸಿಂಹ ॥ ೧೯ ॥

ಮನವು ಮಾಷ ಸುಭಕ್ಷ್ಯದೊಳು ಚಿಂತನೆಯ ಮಾಡಚ್ಯುತನ,
ನಿರಋುತಿ ಮನೆಯೆನಿಪ ಲವಣದೊಳು ಮರೆಯದೆ ಶ್ರೀಜನಾರ್ದನನ,
ನೆನೆವುತಿರು ಫಲರಸಗಳೊಳು ಪ್ರಾಣನ ಉಪೇಂದ್ರನ,
ವೀಳ್ಯದೆಲೆಯೊಳು ದ್ಯುನದಿ ಹರಿರೂಪವನೆ ಕೊಂಡಾಡುತಲೆ ಸುಖಿಸುತಿರು ॥ ೨೦ ॥

ವೇದ ವಿನುತಗೆ ಬುಧನು ಸುಸ್ವಾದೋದಕಾಧಿಪನೆನಿಸಿಕೊಂಬನು–
ಶ್ರೀದ ಕೃಷ್ಣನ ತಿಳಿದು ಪೂಜಿಸುತಿರು ನಿರಂತರದಿ,
ಸಾಧುಕರ್ಮವ ಪುಷ್ಕರನು ಸುನಿವೇದಿತ ಪದಾರ್ಥಗಳ ಶುದ್ಧಿಯ ಗೈದಗೋಸುಗ–
ಹಂಸನಾಮಕಗರ್ಪಿಸುತಲಿಪ್ಪ ॥ ೨೧ ॥

ರತಿ ಸಕಲ ಸುಸ್ವಾದುರಸಗಳ ಪತಿಯೆನಿಸುವಳು ಅಲ್ಲಿ ವಿಶ್ವನು,
ಹುತವಹನ ಚೂಲಿಗಳೊಳಗೆ ಭಾರ್ಗವನ ಚಿಂತಿಪುದು,
ಕ್ಷಿತಿಜ ಗೋಮಯಜ ಆದಿಯೊಳು ಸಂಸ್ಥಿತ ವಸಂತನ ಋಷಭ ದೇವನ–
ತುತಿಸುತಿರು ಸಂತತ ಸದ್ಭಕ್ತಿಪೂರ್ವಕದಿ ॥ ೨೨ ॥

ಪಾಕಕರ್ತೃಗಳೊಳು ಚತುರ್ದಶ ಲೋಕಮಾತೆ ಮಹಾಲಕುಮಿ–
ಗತ ಶೋಕ ವಿಶ್ವಂಭರನ ಚಿಂತಿಪುದೆಲ್ಲ ಕಾಲದಲಿ,
ಚೌಕ ಶುದ್ಧ ಸುಮಂಡಲದಿ ಭೂಸೂಕರಾಹ್ವಯ,
ಉಪರಿ ಚೈಲಪ ಏಕದಂತ ಸನತ್ಕುಮಾರನ ಧ್ಯಾನಿಪುದು ಬುಧರು ॥ ೨೩ ॥

ಶ್ರೀನಿವಾಸನ ಭೋಗ್ಯವಸ್ತುವ ಕಾಣಗೊಡದಂದದಲಿ–
ವಿಷ್ವಕ್ಸೇನ ಪರಿಖಾರೂಪ ನಾಗಿಹನಲ್ಲಿ ಪುರುಷಾಖ್ಯ,
ತಾನೆ ಪೂಜಕ ಪೂಜ್ಯನೆನಿಸಿ ನಿಜಾನುಗರ ಸಂತೈಪ,
ಗುರುಪವಮಾನವಂದಿತ ಸರ್ವಕಾಲಗಳಲ್ಲಿ ಸರ್ವತ್ರ ॥ ೨೪ ॥

ನೂತನ ಸಮೀಚೀನ ಸುರಸೋಪೇತ ಹೃದ್ಯ ಪದಾರ್ಥದೊಳು,
ವಿಧಿಮಾತೆ ತತ್ತದ್ರಸಗಳೊಳು ರಸರೂಪ ತಾನಾಗಿ,
ಪ್ರೀತಿ ಬಡಿಸುತ ನಿತ್ಯದಿ ಜಗನ್ನಾಥ ವಿಠಲನ ಕೂಡಿ,
ತಾ ನಿರ್ಭೀತಳಾಗಿಹಳೆಂದರಿದು ನೀ ಭಜಿಸಿ ಸುಖಿಸುತಿರು ॥ ೨೫ ॥

॥ ಶ್ರೀ ನೈವೇದ್ಯಪ್ರಕರಣ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

॥ ೩೨. ಶ್ರೀ ಕಕ್ಷಾತಾರತಮ್ಯ ಸಂಧಿ ॥

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ,
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥

ಶ್ರೀರಮಣ ಸರ್ವೇಶ ಸರ್ವಗ ಸಾರಭೋಕ್ತ ಸ್ವತಂತ್ರ-
ದೋಷ ವಿದೂರ, ಜ್ಞಾನಾನಂದ ಬಲ ಐಶ್ವರ್ಯ ಸುಖಪೂರ್ಣ-
ಮೂರು ಗುಣವರ್ಜಿತ, ಸಗುಣ ಸಾಕಾರ,
ವಿಶ್ವಸ್ಥಿತಿ ಲಯೋದಯಕಾರಣ ಕೃಪಾಸಾಂದ್ರ ನರಹರೆ ಸಲಹೊ ಸಜ್ಜನರ ॥ ೧ ॥

ನಿತ್ಯಮುಕ್ತಳೆ ನಿರ್ವಿಕಾರಳೆ ನಿತ್ಯಸುಖ ಸಂಪೂರ್ಣೆ,
ನಿತ್ಯಾನಿತ್ಯ ಜಗದಾಧಾರೆ ಮುಕ್ತಾ ಮುಕ್ತ ಗಣವಿನುತೆ,
ಚಿತ್ತಯಿಸು ಬಿನ್ನಪವ, ಶ್ರೀಪುರುಷೋತ್ತಮನ ವಕ್ಷೋನಿವಾಸಿನಿ,
ಭೃತ್ಯವರ್ಗವ ಕಾಯೆ ತ್ರಿಜಗನ್ಮಾತೆ ವಿಖ್ಯಾತೆ ॥ ೨ ॥

ರೋಮಕೂಪಗಳಲ್ಲಿ ಪೃಥ್ಪೃಥಕ್ ಆ ಮಹಾ ಪುರುಷನ ಸ್ವಮೂರ್ತಿ-
ತಾಮರಸಜಾಂಡಗಳ ತದ್ಗತ ವಿಶ್ವರೂಪಗಳ-
ಶ್ರೀಮಹಿಳೆ ರೂಪಗಳ ಗುಣಗಳ ಸೀಮೆಗಾಣದೆ ಯೋಚಿಸುತ,
ಮಮ ಸ್ವಾಮಿ ಮಹಿಮೆಯದಂತೊಯೆಂದಡಿಗಡಿಗೆ ಬೆರಗಾದೆ ॥ ೩ ॥

ಒಂದಜಾಂಡದೊಳೊಂದು ರೂಪದೊಳೊಂದವಯವದೊಳೊಂದು ನಖದೊಳಗೆ-
ಒಂದು ಗುಣಗಳ ಪಾರುಗಾಣದೆ ಕೃತ ಪುಟಾಂಜಲಿಯಿಂ-
ಮಂದ ಜಾಸನ ಪುಳಕ ಪುಳಕಾನಂದ ಬಾಷ್ಪ ತೊದಲು ನುಡಿಗಳಿಂದ,
ಇಂದಿರಾ ವಲ್ಲಭನ ಮಹಿಮೆ ಗಭೀರತೆರವೆಂದ ॥ ೪ ॥

ಏನು ಧನ್ಯರೊ ಬ್ರಹ್ಮ ಗುರುಪವಮಾನರಾಯರು,
ಈ ಪರಿಯಲಿ ರಮಾನಿವಾಸನ ವಿಮಲ ಲಾವಣ್ಯಾತಿಶಯಗಳನು-
ಸಾನುರಾಗದಿ ನೋಡಿ ಸುಖಿಪ ಮಹಾನುಭಾವರ ಭಾಗ್ಯವೆಂತೊ,
ಭವಾನಿಧವನಿಗಸಾಧ್ಯವೆನಿಸಲು ನರರ ಪಾಡೇನು ॥ ೫ ॥

ಆಪಿತಾಮಹ ನೂರುಕಲ್ಪ ರಮಾಪತಿಯ ಗುಣ ಜಪಿಸಿ ಒಲಿಸಿ-
ಮಹಾ ಪರಾಕ್ರಮ ಹನುಮ ಭೀಮಾನಂದಮುನಿಯೆನಿಸಿ,
ಆ ಪರಬ್ರಹ್ಮನ ಸುನಾಭೀಕೂಪಸಂಭವನಾಮದಲಿ ಮೆರೆವ,
ಆ ಪಯೋಜಾಸನ ಸಮೀರರಿಗಭಿನಮಿಪೆ ಸತತ ॥ ೬ ॥

ವಾಸುದೇವನ ಮೂರ್ತಿ ಹೃದಯಾಕಾಶಮಂಡಲ ಮಧ್ಯದಲಿ,
ತಾರೇಶನಂದದಿ ಕಾಣುತತಿ ಸಂತೋಷದಲಿ ತುತಿಪ–
ಆ ಸರಸ್ವತಿ ಭಾರತಿಯರಿಗೆ ನಾ ಸತತ ವಂದಿಸುವೆ ಪರಮೋಲ್ಲಾಸದಲಿ,
ಸುಜ್ಞಾನ ಭಕುತಿಯ ಸಲಿಸಲೆಮಗೆಂದು ॥ ೭ ॥

ಜಗದುದರನ ಸುರೋತ್ತಮನ ನಿಜಪೆಗಳೊಳಾಂತು ಕರಾಬ್ಜದೊಳು ಪದಯುಗಧರಿಸಿ,
ನಖ ಪಂಕ್ತಿಯೊಳು ರಮಣೀಯ ತರವಾದ ನಗಧರನ ಪ್ರತಿಬಿಂಬ ಕಾಣುತ–
ಮಿಗೆ ಹರುಷದಿಂ ಪೊಗಳಿಹಿಗ್ಗುವ,
ಖಗಕುಲಾಧಿಪ ಕೊಡಲಿ ಮಂಗಳ ಸರ್ವ ಸುಜನರಿಗೆ ॥ ೮ ॥

ಯೋಗಿಗಳ ಹೃದಯಕೆ ನಿಲುಕ ನಿಗಮಾಗಮೈಕ ವಿನುತನ ಪರಮನುರಾಗದಲಿ–
ದ್ವಿಸಹಸ್ರ ಜಿಹ್ವೆಗಳಿಂದ ವರ್ಣಿಸುವ,
ಭೂಗಗನ ಪಾತಾಳ ವ್ಯಾಪ್ತನ, ಯೋಗನಿದ್ರಾಸ್ಪದನೆನಿಪ,
ಗುರು ನಾಗರಾಜನ ಪದಕೆ ನಮಿಸುವೆ ಮನದೊಳನವರತ ॥ ೯ ॥

ದಕ್ಷಯಜ್ಞ ವಿಭಂಜನನೆ ವಿರುಪಾಕ್ಷ, ವೈರಾಗ್ಯಾಧಿಪತಿ,
ಸಂರಕ್ಷಿಸೆಮ್ಮನು ಸರ್ವಕಾಲದಿ ಸನ್ಮುದವನಿತ್ತು,
ಯಕ್ಷಪತಿ ಸಖ, ಯಜಪರಿಗೆ ಸುರವೃಕ್ಷ, ವೃಕದನುಜಾರಿ,
ಲೋಕಾಧ್ಯಕ್ಷ, ಶುಕ–ದೂರ್ವಾಸ–ಜೈಗೀಷವ್ಯ ಸಂತೈಸು ॥ ೧೦ ॥

ನಂದಿವಾಹನ ನಳಿನಿಧರ, ಮೌಳೇಂದು ಶೇಖರ, ಶಿವ, ತ್ರಿಯಂಬಕ,
ಅಂಧಕಾಸುರ ಮಥನ, ಗಜ ಶಾರ್ದೂಲ ಚರ್ಮಧರ,
ಮಂದಜಾಸನ ತನಯ, ತ್ರಿಜಗದ್ವಂದ್ಯ, ಶುದ್ಧಸ್ಫಟಿಕ ಸನ್ನಿಭ,
ವಂದಿಸುವೆ ನನವರತ ಕರುಣಿಸಿ ಕಾಯೊ ಮಹದೇವ ॥ ೧೧ ॥

ಹತ್ತು ಕಲ್ಪದಿ ಲವಣ ಜಲಧಿಯೊಳುತ್ತಮ ಶ್ಲೋಕನ ಪೊಲಿಸಿ ಕೃತಕೃತ್ಯನಾಗಿ,
ಜಗತ್ಪತಿಯ ನೇಮದಿ ಕುಶಾಸ್ತ್ರಗಳ ಬಿತ್ತರಿಸಿ ಮೋಹಿಸಿ ದುರಾತ್ಮರ–
ನಿತ್ಯನಿರಯ ನಿವಾಸರೆನಿಸಿದ,
ಕೃತ್ತಿವಾಸನೆ ನಮಿಪೆ ಪಾಲಿಸೊ ಪಾರ್ವತೀರಮಣ ॥ ೧೨ ॥

ಫಣಿ ಫಣಾಂಚಿತ ಮಕುಟರಂಜಿತ, ಕ್ವಣಿತ ಡಮರು ತ್ರಿಶೂಲ,
ಶಿಖಿ ದಿನಮಣಿ ನಿಶಾಕರ ನೇತ್ರ, ಪರಮ ಪವಿತ್ರ ಸುಚರಿತ್ರ,
ಪ್ರಣತಕಾಮದ ಪ್ರಮಥ, ಸುರಮುನಿಗಣಸುಪೂಜಿತ ಚರಣಯುಗ,
ರಾವಣಮದವಿಭಂಜನ ಶೇಷ ಪದಾರ್ಹನಹುದೆಂದು ॥ ೧೩ ॥

ಕಂಬುಪಾಣಿಯ ಪರಮ ಪ್ರೇಮ ನಿತಂಬಿನಿಯರೆಂದೆನಿಪ,
ಲಕ್ಷಣೆ ಜಾಂಬವತಿ ಕಾಳಿಂದಿ ನೀಲಾ ಭದ್ರ ಸಖವಿಂದಾರೆಂಬ-
ಷಣ್ಮಹಿಷಿಯರ ದಿವ್ಯ ಪದಾಂಬುಜಗಳಿಗೆ ನಮಿಪೆ,
ಮಮ ಹೃದಯಾಂಬರದಿ ನೆಲೆಸಲಿ ಬಿಡದೆ ತಮ್ಮರಸನೊಡಗೂಡಿ ॥ ೧೪ ॥

ಆ ಪರಂತಪನೊಲುಮೆಯಿಂದ ಸದಾಪರೋಕ್ಷಿಗಳೆನಿಸಿ,
ಭಗವದ್ರೂಪಗುಣಗಳ ಮಹಿಮೆ ಸ್ವಪತಿಗಳಾನನದಿ ತಿಳಿವ,
ಸೌಪರಣಿ ವಾರುಣಿ ನಗಾತ್ಮಜರಾಪನಿತು ಬಣ್ಣಿಸುವೆ,
ಎನ್ನ ಮಹಾಪರಾಧಗಳೆಣಿಸದೀಯಲಿ ಪರಮ ಮಂಗಳವ ॥ ೧೫ ॥

ತ್ರಿ ದಿವತರು-ಮಣಿ-ಧೇನುಗಳಿಗಾಸ್ಪದನೆನಿಪ,
ತ್ರಿದಶಾಲಯಾಬ್ಧಿಗೆ ಬದರನಂದದಲೊಪ್ಪುತಿಪ್ಪ ಉಪೇಂದ್ರ ಚಂದ್ರಮನ,
ಮೃದು ಮಧುರ ಸುಸ್ತವನದಿಂದಲಿ ಮಧು ಸಮಯ ಪಿಕನಂತೆ ಪಾಡುವ,
ಮುದಿರ ವಾಹನನಂಘ್ರಿ ಯುಗ್ಮಂಗಳಿಗೆ ನಮಿಸುವೆನು ॥ ೧೬ ॥

ಕೃತಿರಮಣ ಪ್ರದ್ಯುಮ್ನದೇವನತುಳ ಬಲ ಲಾವಣ್ಯ ಗುಣ-
ಸಂತತ ಉಪಾಸನ ಕೇತುಮಾಲಾಖಂಡದೊಳು ರಚಿಪ-
ರತಿಮನೋಹರನಂಘ್ರಿ ಕಮಲಕೆ ನತಿಸುವೆನು ಭಕುತಿಯಲಿ,
ಮಮ ದುರ್ಮತಿಕಳೆದು ಸನ್ಮತಿಯನೀಯಲಿ ನಿರುತ ಅಜಸ್ರ ಎಮಗೊಲಿದು ॥ ೧೭ ॥

ಚಾರುತರ ನವವಿಧ ಭಕುತಿ ಗಂಭೀರ ವಾರಾಶಿಯೊಳು,
ಪರಮೋದಾರ ಮಹಿಮನ ಹೃದಯ ಫಣಿಪತಿ ಪೀಠದಲಿ ಭಜಿಪ-
ಭೂರಿಕರ್ಮಾಕರನೆನಿಸುವ ಶರೀರಮಾನಿ ಪ್ರಾಣಪತಿ ಪದವಾರಿರುಹಕಾನಮಿಪೆ,
ಮದ್ಗುರುರಾಯ ನಹುದೆಂದು ॥ ೧೮ ॥

ವಿತತ ಮಹಿಮನ, ವಿಶ್ವತೋಮುಖನ, ಅತುಳ ಭುಜಬಲ-
ಕಲ್ಪ ತರುವಾಶ್ರಿತರೆನಿಸಿ, ಸಕಲೇಷ್ಟ ಪಡೆದನುದಿನದಿ ಮೋದಿಸುವ,
ರತಿ-ಸ್ವಯಂಭುವ-ದಕ್ಷ-ವಾಚಸ್ಪತಿ-ಬಿಡೌಜನ ಮಡದಿ ಶಚಿ-
ಮನ್ಮಥ ಕುಮಾರನಿರುದ್ಧರೆಮಗೀಯಲಿ ಸುಮಂಗಳವ ॥ ೧೯ ॥

ಭವವನಧಿ ನವಪೋತ, ಪುಣ್ಯ ಶ್ರವಣ ಕೀರ್ತನ ಪಾದವನರುಹ-
ಭವನನಾವಿಕನಾಗಿ ಭಕುತರ ತಾರಿಸುವ ಬಿಡದೆ,
ಪ್ರವಹಮಾರುತ ದೇವ, ಪರಮೋತ್ಸವ ವಿಶೇಷ ನಿರಂತರ,
ಮಹಾಪ್ರವಹದಂದದಿ ಕೊಡಲಿ ಭಗವದ್ಭಕ್ತ ಸಂತತಿಗೆ ॥ ೨೦ ॥

ಜನರನುದ್ಧರಿಸುವೆನೆನುತ ನಿಜಜನಕನನುಮತದಲಿ,
ಸ್ವಯಂಭುವ ಮನುವಿನಿಂದಲಿ ಪಡೆದೆ ಸುಕುಮಾರಕರ ನೊಲುಮೆಯಲಿ,
ಜನನಿ ಶತರೂಪಾನಿತಂಬಿನಿ, ಮನವಚನ ಕಾಯದಲಿ ತಿಳಿದನುದಿನದಿ ನಮಿಸುವೆ,
ಕೊಡು ಎಮಗೆ ಸನ್ಮಂಗಳವ ನೊಲಿದು ॥ ೨೧ ॥

ನರನ ನಾರಾಯಣನ ಹರಿ ಕೃಷ್ಣರ ಪಡೆದೆ ಪುರುಷಾರ್ಥ ತೆರದಲಿ,
ತರಣಿ ಶಶಿ ಶತರೂಪರಿಗೆ ಸಮನೆನಿಸಿ– ಪಾಪಿಗಳ ನಿರಯದೊಳು ನೆಲೆಗೊಳಿಸಿ–
ಸಜ್ಜನ ನೆರವಿಯನು ಪಾಲಿಸುವ ಔದುಂಬರ,
ಸಲಹು ಸಲಹೆಮ್ಮ ಬಿಡದಲೆ ಪರಮ ಕರುಣದಲಿ ॥ ೨೨ ॥

ಮಧು ವಿರೋಧಿ ಮನೋಜ, ಕ್ಷೀರೋದಧಿ ಮಥನ ಸಮಯದಲುದಿಸಿ,
ನೆರೆಕುಧರಜಾವಲ್ಲಭನ ಮಸ್ತಕ ಮಂದಿರದಿ ಮೆರೆವ ವಿಧು,
ತವಾಂಘ್ರಿ ಸರೋಜ ಯುಗಳಕೆ ಮಧುಪನಂದದಲೆರಗಲು, ಎನ್ಮನದ ಅಧಿಪ,
ವಂದಿಪೆನು ಅನುದಿನ ಅಂತಸ್ತಾಪ ಪರಿಹರಿಸು ॥ ೨೩ ॥

ಶ್ರೀವನರುಹಾಂಬಕನ ನೇತ್ರಗಳೇ ಮನೆಯೆನಿಸಿ,
ಸಜ್ಜನರಿಗೆ ಕರಾವಲಂಬನ ವೀವ ತೆರದಿ ಮಯೂಖ ವಿಸ್ತರಿಪ–
ಆ ವಿವಸ್ವಾನ್ನೆನಿಸಿಕೊಂಬ ವಿಭಾವಸು, ಅಹರ್ನಿಶಿಗಳಲಿ ಕೊಡಲೀ,
ವಸುಂಧರೆಯೊಳು ವಿಪಶ್ಚಿತರೊಡನೆ ಸುಜ್ಞಾನ ॥ ೨೪ ॥

ಲೋಕಮಾತೆಯ ಪಡೆದು ನೀ ಜಗದೇಕಪಾತ್ರನಿಗಿತ್ತ ಕಾರಣ,
ಶ್ರೀಕುಮಾರಿ ಸಮೇತ ನೆಲಸಿದ ನಿನ್ನ ಮಂದಿರದಿ,
ಆ ಕಮಲಭವ ಮುಖರು ಬಿಡದೆ ಪರಾಕೆನುತ ನಿಂದಿಹರೊ,
ಗುಣ ರತ್ನಾಕರನೆ ಬಣ್ಣಿಸಲಳವೆ ಕೊಡು ಎಮಗೆ ಸನ್ಮನವ ॥ ೨೫ ॥

ಪಣೆಯೊಳೊಪ್ಪುವ ತಿಲಕ, ತುಲಸೀ ಮಣಿಗಣಾನ್ವಿತ ಕಂಠ,
ಕರದಲಿ ಕ್ವಣಿತ ವೀಣಾ, ಸುಸ್ವರದಿ ಬಹುತಾಳಗತಿಗಳಲಿ–
ಪ್ರಣವ ಪ್ರತಿಪಾದ್ಯನ ಗುಣಂಗಳ ಕುಣಿದು ಪಾಡುತ–
ಪರಮ ಸುಖ ಸಂದಣಿಯೊಳಾಡುವ, ದೇವಋಷಿ ನಾರದರಿಗಭಿನಮಿಪೆ ॥ ೨೬ ॥

ಆ ಸರಸ್ವತಿ ತೀರದಲಿ ಬಿನ್ನೈಸಲಾ ಮುನಿಗಳ ನುಡಿಗೆ,
ಜಡಜಾಸನ ಮಹೇಶಾಚ್ಯುತರ ಲೋಕಂಗಳಿಗೆ ಪೋಗಿ,
ತಾ ಸಕಲ ಗುಣಗಳ ವಿಚಾರಿಸಿ ಕೇಶವನೆ ಪರದೈವವೆಂದುಪದೇಶಿಸಿದ ಭೃಗುಮುನಿಪ,
ಕೊಡಲೆಮಗಖಿಳ ಪುರುಷಾರ್ಥ ॥ ೨೭ ॥

ಬಿಸರುಹಾಂಬಕನಾಜ್ಞೆಯಲಿ ಸುಮನಸ ಮುಖನು ತಾನೆನಿಸಿ,
ನಾನಾ ರಸಗಳುಳ್ಳ ಹವಿಸ್ಸುಗಳನವರವರಿಗೊಯ್ದೀವ,
ವಸುಕುಲಾಧಿಪ ಯಜ್ಞ ಪುರುಷನ, ಅಸಮ ಬಲ ರೂಪಂಗಳಿಗೆ ವಂದಿಸುವೆ,
ಜ್ಞಾನ ಯಶಸ್ಸು ವಿದ್ಯಸುಬುದ್ಧಿಕೊಡಲೆಮಗೆ ॥ ೨೮ ॥

ತಾತನಪ್ಪಣೆಯಿಂದ ನೀ ಪ್ರಖ್ಯಾತಿಯುಳ್ಳರವತ್ತು ಮಕ್ಕಳ–
ಪ್ರೀತಿಯಿಂದಲಿ ಪಡೆದವರವರಿಗಿತ್ತು ಮನ್ನಿಸಿದೆ,
ವೀತಿ ಹೋತ್ರನ ಸಮಳೆನಿಸುವ ಪ್ರಸೂತಿ ಜನನಿ,
ತ್ವದಂಘ್ರಿ ಕಮಲಕೆ ನಾ ತುತಿಸಿ ತಲೆಬಾಗುವೆಮ್ಮ ಕುಟುಂಬ ಸಲಹುವದು ॥ ೨೯ ॥

ಶತಧೃತಿಯ ಸುತರೀರ್ವರುಳಿದ ಅಪ್ರತಿಮ ಸುತಪೋನಿಧಿಗಳ–
ಪರಾಜಿತನ ಸುಸಮಾಧಿಯೊಳಿರಿಸಿ ಮೂರ್ಲೋಕದೊಳು ಮೆರೆವ,
ವ್ರತಿವರ ಮರೀಚಿ–ಅತ್ರಿ–ಪುಲಹಾ–ಕ್ರತು–ವಸಿಷ್ಠ–ಪುಲಸ್ತ್ಯ–
ವೈವಸ್ವತನು–ವಿಶ್ವಾಮಿತ್ರ–ಅಂಗಿರರ ಅಂಘ್ರಿಗೆರಗುವೆನು ॥ ೩೦ ॥

ದ್ವಾದಶಾದಿತ್ಯರೊಳು ಮೊದಲಿಗನಾದ ಮಿತ್ರ, ಪ್ರವಹ ಮಾನಿನಿಯಾದ ಪ್ರಾವಹಿ,
ನಿರಋತಿ, ನಿರ್ಜರ ಗುರುಮಹಿಳೆ ತಾರಾ,
ಈ ದಿವೌಕಸರನುದಿನಾಧಿವ್ಯಾಧಿ ಉಪಟಳವಳಿದು,
ವಿಬುಧರಿಗಾದರದಿ ಕೊಡಲಖಿಳ ಮಂಗಳವಾವ ಕಾಲದಲಿ ॥ ೩೧ ॥

ಮಾನನಿಧಿಗಳೆನಿಸುವ ವಿಷ್ವಕ್ಸೇನ–ಧನಪ–ಗಜಾನನರಿಗೆ–
ಸಮಾನರೆಂಭತ್ತೈದು ಶೇಷ ಶತಸ್ಥ ದೇವಗಣಕೆ–
ಆನಮಿಸುವೆನು ಬಿಡದೆ, ಮಿಥ್ಯಾಜ್ಞಾನಕಳೆದು ಸುಬುದ್ಧಿನಿತ್ತು,
ಸದಾನುರಾಗದಲೆಮ್ಮ ಪರಿಪಾಲಿಸಲಿ ಯೆಂದೆನುತ ॥ ೩೨ ॥

ಭೂತಮರುತ ನವಾಂತರಭಿಮಾನೀ, ತಪಸ್ವಿ ಮರೀಚಿ ಮುನಿ,
ಪುರುಹೂತನಂದನ, ಪಾದಮಾನಿ ಜಯಂತರೆಮಗೊಲಿದು,
ಕಾತರವ ಪುಟ್ಟಿಸದೆ ವಿಷಯದಿ ವೀತಭಯನ ಪದಾಬ್ಜದಲಿ ವಿಪರೀತಬುದ್ಧಿಯನೀಯದೆ–
ಸದಾ ಪಾಲಿಸಲಿ ಯೆಮ್ಮ ॥ ೩೩ ॥

ಓದಿಸುವ ಗುರುಗಳನು ಜರಿದು ಸಹೋದುಗರಿಗುಪದೇಶಿಸಿದ,
ಮಹದಾದಿಕಾರಣ ಸರ್ವಗುಣ ಸಂಪೂರ್ಣ ಹರಿಯೆಂದು ವಾದಿಸುವ,
ತತ್ಪತಿಯ ತೋರೆಂದಾದನುಜ ಬೆಸಗೊಳಲು,
ಸ್ತಂಭದಿ ಶ್ರೀದನಾಕ್ಷಣ ತೋರಿಸಿದ ಪ್ರಹ್ಲಾದ ಸಲಹೆಮ್ಮ ॥ ೩೪ ॥

ಬಲಿಮೊದಲು ಸಪ್ತೇಂದ್ರರಿವರಿಗೆ ಕಲಿತ ಕರ್ಮಜ ದಿವಿಜರೆಂಬರು,
ಉಳಿದ ಏಕಾದಶ ಮನುಗಳು ಉಚಿತ್ಥ್ಯ ಚವನ ಮುಖ,
ಕುಲ ಋಷಿಗಳೆಂಭತ್ತು, ಹೈಹಯ, ಇಳಿಯ ಕಂಪನಗೈದ ಪೃಥು,
ಮಂಗಳ ಪರಿಕ್ಷಿತ-ನಹುಷ-ನಾಭಿ-ಯಯಾತಿ-ಶಶಿಬಿಂದು ॥ ೩೫ ॥

ಶತಕ ಸಂಕೇತುಳ್ಳ ಪ್ರಿಯವ್ರತ ಭರತ ಮಾಂಧಾತ ಪುಣ್ಯಾಶ್ರಿತರು,
ಜಯವಿಜಯಾದಿಗಳು ಗಂಧರ್ವರೆಂಟು ಜನ,
ಹುತವಹಜ ಪಾವಕ, ಸನಾತನ, ಪಿತೃಗಳೇಳ್ವರು, ಚಿತ್ರಗುಪ್ತರು,
ಪ್ರತಿದಿನದಿ ಪಾಲಿಸಲಿ ತಮ್ಮವನೆಂದು ಎಮಗೊಲಿದು ॥ ೩೬ ॥

ವಾಸವಾಲಯ ಶಿಲ್ಪಿ, ವಿಮಲ ಜಲಾಶಯಗಳೊಳು ರಮಿಪ ಊರ್ವಶಿ,
ಭೇಶರವಿಗಳ ರಿಪುಗಳೆನಿಸುವ ರಾಹುಕೇತುಗಳು,
ಶ್ರೀಶ ಪದಪಂಥಾನ ಧೂಮಾರ್ಚೀರ ದಿವಿಜರು,
ಕರ್ಮಜರಿಗೆ ಸದಾ ಸಮಾನ ದಿವೌಕಸರು ಕೊಡಲೆಮಗೆ ಮಂಗಳವ ॥ ೩೭ ॥

ದ್ಯುನದಿ-ಶ್ಯಾಮಲ-ಸಂಜ್ಞ-ರೋಹಿಣಿ-ಘನಪ ಪರ್ಜನ್ಯ-
ಅನಿರುದ್ಧನ ವನಿತೆ ಬ್ರಹ್ಮಾಂಡಾಭಿಮಾನಿ ವಿರಾಟ ದೇವಿಯರ ನೆನೆವೆನು,
ಆ ನಲವಿಂದೆ ದೇವಾನನ ಮಹಿಳೆ ಸ್ವಾಹಾಖ್ಯರು,
ಆಲೋಚನೆ ಕೊಡಲಿ ನಿರ್ವಿಘ್ನದಿಂ ಭಗವದ್ಗುಣಂಗಳಲಿ ॥ ೩೮ ॥

ವಿಧಿಪಿತನ ಪಾದಾಂಬುಜಗಳಿಗೆ ಮಧುಪನಂತೆ ವಿರಾಜಿಪ,
ಅಮಲ ಉದಕಗಳಿಗೆ ಸದಾಭಿಮಾನಿಯು ಯೆಂದೆನಿಸಿಕೊಂಬ ಬುಧಗೆ ನಾ ವಂದಿಸುವೆ ಸಮ್ಮೋದದಿ,
ನಿರಂತರವೊಲಿದು ಎಮಗಭ್ಯುದಯ ಪಾಲಿಸಲೆಂದು,
ಪರಮೋತ್ಸವದೊಳನುದಿನದಿ ॥ ೩೯ ॥

ಶ್ರೀವಿರಂಚಾದ್ಯರ ಮನಕೆ ನಿಲುಕಾವ ಕಾಲಕೆ-
ಜನನರಹಿತನ ತಾ ವೊಲಿಸಿ ಮಗನೆಂದು ಮುದ್ದಿಸಿ ಲೀಲೆಗಳ ನೋಳ್ಪ-
ದೇವಕಿಗೆ ವಂದಿಪೆ, ಯಶೋದಾ ದೇವಿಗಾನಮಿಸುವೆನು ಬಿಡದೆ,
ಪರಮ ಕೃಪಾವಲೋಕನದಿಂದ ಸಲಹುವದೆಮ್ಮ ಸಂತತಿಯ ॥ ೪೦ ॥

ಪಾಮರರನ ಪವಿತ್ರಗೈಸುವ-
ಶ್ರೀಮುಕುಂದನ ವಿಮಲ ಮಂಗಳ ನಾಮಗಳಿಗಭಿಮಾನಿಯಾದ ಉಷಾಖ್ಯದೇವಿಯರು-
ಭೂಮಿಯೊಳಗುಳ್ಳಖಿಳ ಸಜ್ಜನರ ಆಮಯಾದಿಗಳಳಿದು ಸಲಹಲಿ,
ಆ ಮರುತ್ವಾನ್ ಮನೆಯ ವೈದ್ಯರ ರಮಣಿ ಪ್ರತಿದಿನದಿ ॥ ೪೧ ॥

ಪುರುಟಲೋಚನ ನಿನ್ನ ಕದ್ದೊಯಿದಿರಲು ಪ್ರಾರ್ಥಿಸೆ,
ದೇವತೆಗಳುತ್ತರವ ಲಾಲಿಸಿ ತಂದ ವರಾಹರೂಪ ತಾನಾಗಿ,
ಧರಣಿ ಜನನಿ, ನಿನ್ನ ಪಾದಕ್ಕೆರಗಿ ಬಿನ್ನೈಸುವೆನು,
ಪಾದಸ್ಪರುಶ ಮೊದಲಾದಖಿಳ ದೋಷಗಳೆಣಿಸದಿರು ಯೆಂದು ॥ ೪೨ ॥

ವನಧಿ ವಸನೆ, ವರಾದ್ರಿ ನಿಚಯು, ಸ್ತನ ವಿರಾಜಿತೇ,
ಚೇತನಾ ಚೇತನ ವಿಧಾರಕೆ, ಗಂಧರಸ ರೂಪಾದಿ ಗುಣವಪುಷೇ,
ಮುನಿಕುಲೋತ್ತಮ ಕಶ್ಯಪನ ನಿಜತನುಜೆ, ನಿನಗಾನಮಿಪೆ,
ಎನ್ನವಗುಣಗಳೆಣಿಸದೆ ಪಾಲಿಪುದು ಪರಮಾತ್ಮನರ್ಧಾಂಗಿ ॥ ೪೩ ॥

ಹರಿಗುರುಗಳರ್ಚಿಸದ ಪಾಪಾತ್ಮರನ ಶಿಕ್ಷಿಸಲೋಸುಗ–
ಶನೈಶ್ಚರನೆನಿಸಿ ದುಷ್ಫಲಗಳೀವೆ ನಿರಂತರದಿ ಬಿಡದೆ,
ತರಣಿನಂದನ, ನಿನ್ನ ಪಾದಾಂಬುರುಹಗಳಿಗಾನಮಿಪೆ,
ಬಹು ದುಸ್ತರ ಭವಾರ್ಣದಿ ಮಗ್ನನಾದೆನ್ನುದ್ಧರಿಸ ಬೇಕು ॥ ೪೪ ॥

ನಿರತಿಶಯ ಸುಜ್ಞಾನ ಪೂರ್ವಕ ವಿರಚಿಸುವ ನಿಷ್ಕಾಮಕರ್ಮಗಳರಿತು,
ತತ್ತತ್ಕಾಲದಲಿ ತಜ್ಜನ್ಯ ಫಲರಸವ ಹರಿಯ ನೇಮದಲುಣಿಸಿ,
ಬಹು ಜೀವರಿಗೆ ಕರ್ಮಪನೆನಿಪ ಗುರು ಪುಷ್ಕರನು,
ಸತ್ಕ್ರಿಯಂಗಳಲಿ ನಿರ್ವಿಘ್ನತೆಯ ಕೊಡಲಿ ॥ ೪೫ ॥

ಶ್ರೀನಿವಾಸನ ಪರಮ ಕಾರುಣ್ಯಾನಿವಾಸಸ್ಥಾನರೆನಿಪ,
ಕೃಶಾನುಜರು ಸಾಹಸ್ರ ಷೋಡಶ ಶತರು, ಶ್ರೀಕೃಷ್ಣ ಮಾನಿನಿಯರೆಪ್ಪತ್ತು,
ಯಕ್ಷರು ದಾನವರು ಮೂವತ್ತು,
ಚಾರಣ ಅಜಾನಜಾಮರರು, ಅಪ್ಸರರು, ಗಂಧರ್ವರಿಗೆ ನಮಿಪೆ ॥ ೪೬ ॥

ಕಿನ್ನರರು–ಗುಹ್ಯಕರು–ರಾಕ್ಷಸ ಪನ್ನಗರು–ಪಿತೃಗಳು–ಸಿದ್ಧರು–
ಸನ್ನುತ ಅಜಾನಜರು ಸಮರು, ಇವರಮರ ಯೋನಿಜರು,
ಇನ್ನಿವರ ಗಣವೆಂತು ಬಣ್ಣಿಸಲೆನ್ನೊಳವೆ,
ಕರುಣದಲಿ ಪರಮಾಪನ್ನ ಜನರಿಗೆ ಕೊಡಲಿ ಸನ್ಮುದ ಪರಮ ಸ್ನೇಹದಲಿ ॥ ೪೭ ॥

ಆ ಯಮುನೆಯೊಳು ಸಾದರದಿ ಕಾತ್ಯಾಯನೀ ವ್ರತ ಧರಿಸಿ,
ಕೆಲರು ದಯಾಯುಧನೆ ಪತಿಯೆಂದು, ಕೆಲವರು ಜಾರತನದಲ್ಲಿ ವಾಯುಪಿತನೊಲಿಸಿದರು,
ಈರ್ವಗೆ ತೋಯಸರಸರ ಪಾದಕಮಲಕೆ ನಾಯೆರಗುವೆ,
ಮನೋರಥಂಗಳ ಸಲಿಸಲನುದಿನದಿ ॥ ೪೮ ॥

ನೂರು ಮುನಿಗಳ ಉಳಿದು ಮೇಲಣ ನೂರು ಕೋಟಿ ತಪೋಧನರ–
ಪಾದಾರವಿಂದಕೆ ಮುಗಿವೆ ಕರಗಳನುದ್ಧರಿಸಲೆಂದು,
ಮೂರು ಸಪ್ತ ಶತಾಹ್ವಯರ ತೊರೆದು,
ಈ ಋಷಿಗಳಾನಂತರಲಿಹ ಭೂರಿ ಪಿತೃಗಳು ಕೊಡಲೆಮಗೆ ಸಂತತ ಸುಮಂಗಳವ ॥ ೪೯ ॥

ಪಾವನಕೆ ಪಾವನನೆನಿಸುವ ರಮಾವಿನೋದಿಯ ಗುಣಗಣಂಗಳ–
ಸಾವಧಾನದಲೇಕ ಮಾನಸರಾಗಿ ಸುಸ್ವರದಿ ಆ ವಿಬುಧಪತಿ ಸಭೆಯೊಳಗೆ–
ನಾನಾ ವಿಲಾಸದಿ ಪಾಡಿ ಸುಖಿಸುವ,
ದೇವ ಗಂಧರ್ವರು ಕೊಡಲಿ ಎಮಗಖಿಳ ಪುರುಷಾರ್ಥ ॥ ೫೦ ॥

ಭುವನ ಪಾವನ ಮಾಳ್ಪ ಲಕ್ಷ್ಮೀಧವನ ಮಂಗಳ ದಿವ್ಯ ನಾಮ ಸ್ತವನಗೈವ–
ಮನುಷ್ಯ ಗಂಧರ್ವರಿಗೆ ವಂದಿಸುವೆ,
ಪ್ರವರ ಭೂಭುಜರುಳಿದು ಮಧ್ಯಮ ಕುವಲಯುಪರೆಂದು ಎನಿಸಿಕೊಂಬರ–
ದಿವಸ ದಿವಸಂಗಳಲಿ ನೆನೆವೆನು ಕರಣ ಶುದ್ಧಿಯಲಿ ॥ ೫೧ ॥

ಶ್ರೀಮುಕುಂದನ ಮೂರ್ತಿಸಲೆ ಸೌದಾಮಿನಿಯುವೋಲ್–
ಹೃದಯ ವಾರಿಜ ವ್ಯೋಮ ಮಂಡಲ ಮಧ್ಯದಲಿ ಕಾಣುತಲಿ ಮೋದಿಸುವ–
ಆ ಮನುಷ್ಯೋತ್ತಮರ ಪದಯುಗ ತಾಮರಸಗಳಿಗೆರಗುವೆ,
ಸದಾ ಕಾಮಿತಾರ್ಥಗಳಿತ್ತು ಸಲಹಲಿ ಪ್ರಣತ ಜನತತಿಯ ॥ ೫೨ ॥

ಈ ಮಹೀ ಮಂಡಲದೊಳಿಹ ಗುರು ಶ್ರೀಮದಾಚಾರ್ಯರ ಮತಾನುಗರು,
ಆ ಮಹಾ ವೈಷ್ಣವರ ವಿಷ್ಣು ಪದಾಬ್ಜ ಮಧುಕರರ ಸ್ತೋಮಕಾನಮಿಸುವೆನು,
ಅವರವರ ನಾಮಗಳನೇಂ ಪೇಳ್ವೆ ಬಹುವಿಧ,
ಯಾಮ ಯಾಮಂಗಳಲಿ ಬೋಧಿಸಲೆಮಗೆ ಸನ್ಮತಿಯ ॥ ೫೩ ॥

ಮಾರನಯ್ಯನ ಕರುಣ ಪಾರಾವಾರ ಮುಖ್ಯ ಸುಪಾತ್ರರೆನಿಪ,
ಸರೋರುಹಾಸನ ವಾಣಿ ರುದ್ರೇಂದ್ರಾದಿ ಸುರನಿಕರ–
ತಾರತಮ್ಯಾತ್ಮಕ ಸುಪದ್ಯಗಳಾರು ಪಠಿಸುವರಾ ಜನರಿಗೆ,
ರಮಾರಮಣ ಪೂರೈಸಲೀಪ್ಸಿತ ಸರ್ವಕಾಲದಲಿ ॥ ೫೪ ॥

ಮೂರುಕಾಲಗಳಲ್ಲಿ ತುತಿಸೆ ಶರೀರ ವಾಙ್ಮನ: ಶುದ್ಧಿ ಮಾಳ್ಪುದು,
ದೂರಗೈಸುವದಖಿಳ ಪಾಪ ಸಮೂಹ ಪ್ರತಿದಿನದಿ,
ಚೋರಭಯ–ರಾಜಭಯ–ನಕ್ರ–ಚಮೂರ–ಶಸ್ತ್ರ–ಜಲಾಗ್ನಿ–ಭೂತ–
ಮಹೋರಗ–ಜ್ವರ–ನರಕಭಯ ಸಂಭವಿಸದೆಂದೆಂದು ॥ ೫೫ ॥

ಜಯಜಯತು ತ್ರಿಜಗದ್ವಿಲಕ್ಷಣ, ಜಯಜಯತು ಜಗದೇಕ ಕಾರಣ,
ಜಯಜಯತು ಜಾನಕೀರಮಣ, ನಿರ್ಗತ ಜರಾಮರಣ,
ಜಯಜಯತು ಜಾಹ್ನವೀಜನಕ, ಜಯಜಯತು ದೈತ್ಯ ಕುಲಾಂತಕ,
ಭವಾಮಯಹರ, ಜಗನ್ನಾಥ ವಿಠಲ, ಪಾಹಿಮಾಂ ಸತತ ॥ ೩೬ ॥

॥ ಇತಿ ಶ್ರೀ ಕಕ್ಷಾತಾರತಮ್ಯ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀಃ ॥

॥ ಇತಿ ಶ್ರೀ ಫಲಶ್ರುತಿ ಸಂಧಿ ॥
॥ ಇತಿ ಶ್ರೀ ಫಲಸ್ತುತಿ ಸಂಧಿ ॥

ಶ್ರೀಜಗನ್ನಾಥ ದಾಸಾರ್ಯ ಪರಮ ಪ್ರಿಯ ಶಿಷ್ಯ
ಶ್ರೀ ಶ್ರೀದವಿಠಲ ದಾಸಾರ್ಯ (ಶ್ರೀ ಕರ್ಜಗಿ ದಾಸಪ್ಪದಾಸ) ವಿರಚಿತ
ಶ್ರೀಮದ್ಧರಿಕಥಾಮೃತಸಾರ ಫಲಸ್ತುತಿ ಸಂಧಿ

ಹರಿಕಥಾಮೃತಸಾರ ಗುರುಗಳ ।
ಕರುಣದಿಂದಾಪನಿತು ಪೇಳುವೆ ॥
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥

ಹರಿಕಥಾಮೃತಸಾರ ಶ್ರೀಮ ।
ದ್ಗುರುವರ ಜಗನ್ನಾಥ ದಾಸರ ।
ಕರತಳಾಮಲಕವೆನೆ ಪೇಳಿದ ಸಕಲ ಸಂಧಿಗಳ ॥
ಪರಮ ಪಂಡಿತ ಮಾನಿಗಳು ಮ ।
ತ್ಸರಿಸಲೆದೆಗಿಚ್ಚಾಗಿ ತೋರುವು ।
ದರಸಿಕರಿಗಿದು ತೋರಿ ಪೇಳುವದಲ್ಲ ಧರೆಯೊಳಗೆ ॥ ೧ ॥

ಭಾಮಿನೀ ಷಟ್ಪದಿಯ ರೂಪದ ।
ಲೀಮಹಾದ್ಭುತ ಕಾವ್ಯದಾದಿಯೊ ।
ಳಾ ಮನೋಹರ ತರ ತಮಾತ್ಮಕ ನಾಂದಿ ಪದ್ಯಗಳ ॥
ಯಾಮಯಾಮಕೆ ಪಠಿಸುವವರ ಸು ।
ಧಾಮಸಖ ಕೈಪಿಡಿಯಲೋಸುಗ ।
ಪ್ರೇಮದಿಂದಲಿ ಪೇಳ್ದ ಗುರು ಕಾರುಣ್ಯಕೇನೆಂಬೆ ॥ ೨ ॥

ಸಾರವೆಂದರೆ ಹರಿಕಥಾಮೃತ ।
ಸಾರವೆಂಬುವುದೆಮ್ಮ ಗುರುವರ ।
ಸಾರಿದಲ್ಲದೆ ತಿಳಿಯದೆನುತ ಮಹೇಂದ್ರ ನಂದನನ ॥
ಸಾರಥಿಯ ಬಲಗೊಂಡು ಸಾರಾ ।
ಸಾರಗಳ ನಿರ್ಣೈಸಿ ಪೇಳ್ದನು ।
ಸಾರ ನಡೆವ ಮಹಾತ್ಮರಿಗೆ ಸಂಸಾರ ವೆಲ್ಲಿಹದೊ ॥ ೩ ॥

ದಾಸವರ್ಯರ ಮುಖದಿ ನಿಂದು ರ ।
ಮೇಶನನು ಕೀರ್ತಿಸುವ ಮನದಭಿ ।
ಲಾಷೆಯಲಿ ವರ್ಣಾಭಿಮಾನಿಗಳೊಲಿದು ಪೇಳಿಸಿದ ॥
ಈ ಸುಲಕ್ಷಣ ಕಾವ್ಯದೊಳಗ್ಯತಿ ।
ಪ್ರಾಸಗಳಿಗೆ ಪ್ರಯತ್ನವಿಲ್ಲದೆ ।
ಲೇಸುಲೇಸನೆ ಶ್ರಾವ್ಯ ಮಾದುದೆ ಕುರುಹು ಕವಿಗಳಿಗೆ ॥ ४ ॥

ಪ್ರಾಕೃತೋಕ್ತಿಗಳೆಂದು ಬರಿದೆ ಮ ।
ಹಾಕೃತಘ್ನರು ಜರಿವರಲ್ಲದೆ ।
ಸ್ವೀಕೃತವ ಮಾಡದಲೆ ಬಿಡುವರೆ ಸುಜನರಾದವರು ॥
ಶ್ರೀಕೃತೀಪತಿ ಅಮಲ ಗುಣಗಳು ।
ಈ ಕೃತಿಯೊಳುಂಟಾದ ಬಳಿಕ ।
ಪ್ರಾಕೃತವೆ ಸಂಸ್ಕೃತದ ಸಡಗರವೇನು ಸುಜನರಿಗೆ ॥ ೫ ॥

ಶ್ರುತಿಗೆ ಶೋಭನವಾಗದಡೆ ಜಡ ।
ಮತಿಗೆ ಮಂಗಳ ವೀಯದಡೆ ಶ್ರುತಿ ।
ಸ್ಮೃತಿಗೆ ಸಮ್ಮತವಾಗದಿದ್ದಡೆ ನಮ್ಮ ಗುರುರಾಯ ॥
ಮಥಿಸಿ ಮಧ್ವಾಗಮ ಪಯೋಬ್ಧಿಯ ।
ಕ್ಷಿತಿಗೆ ತೋರಿದ ಬ್ರಹ್ಮ ವಿದ್ಯಾ ।
ರತರಿಗೀಪ್ಸಿತ ಹರಿಕಥಾಮೃತಸಾರ ವೆನಿಸುವದು ॥ ೬ ॥

ಭಕ್ತಿವಾದದಿ ಪೇಳ್ದನೆಂಬ ಪ್ರ ।
ಸಕ್ತಿ ಸಲ್ಲದು ಕಾವ್ಯದೊಳು ಪುನ ।
ರುಕ್ತಿ ಶುಷ್ಕ ಸಮಾಸ ಪದ ವ್ಯತ್ಯಾಸ ವೊದಲಾದ ॥
ಯುಕ್ತಿ ಶಾಸ್ತ್ರ ವಿರುದ್ಧ ಶಬ್ದ ವಿ ।
ಭಕ್ತಿ ವಿಷಮಗಳಿರಲು ಜೀವ ।
ನ್ಮುಕ್ತ ಭೋಗ್ಯವಿದೆಂದು ಸಿರಿಮದನಂತ ಮೆಚ್ಚುವನೆ? ॥ ೭ ॥

ಆಶು ಕವಿಕುಲ ಕಲ್ಪತರು ದಿ ।
ಗ್ದೇಶ ವರಿಯಲು ರಂಗನೊಲಮೆಯ ।
ದಾಸಕೂಟಸ್ಥರಿಗೆರಗಿ ನಾ ಬೇಡಿ ಕೊಂಬುವೆನು ॥
ಈ ಸುಲಕ್ಷಣ ಹರಿಕಥಾಮೃತ ।
ಮೀಸಲರಿಯದೆ ಸಾರ ದೀರ್ಘ ।
ದ್ವೇಷಿಗಳಿಗೆರೆಯದಲೆ ಸಲಿಸುವದೆನ್ನ ಬಿನ್ನಪವ ॥ ೮ ॥

ಪ್ರಾಸಗಳ ಪೊಂದಿಸದೆ ಶಬ್ದ ।
ಶ್ಲೇಷಗಳ ಶೋಧಿಸದೆ ದೀರ್ಘ ।
ಹ್ರಾಸಗಳ ಸಲ್ಲಿಸದೆ ಷಟ್ಪದಿಗತಿಗೆ ನಿಲ್ಲಿಸದೆ ॥
ದೂಷಕರು ದಿನದಿನದಿ ಮಾಡುವ ।
ದೂಷಣೆಯೆ ಭೂಷಣಗಳೆಂದುಪ ।
ದೇಶಗಮ್ಯವು ಹರಿಕಥಾಮೃತಸಾರ ಸಾಧ್ಯರಿಗೆ ॥ ೯ ॥

ಅಶ್ರುತಾಗಮ ಇದರ ಭಾವ ಪ ।
ರಿಶ್ರಮವು ಬಲ್ಲವರಿಗಾನಂ ।
ದಾಶ್ರುಗಳ ಮಳೆಗರೆಸಿ ಮರೆಸುವ ಚಮತ್ಕೃತಿಯ ॥
ಮಿಶ್ರರಿಗೆ ಮರೆ ಮಾಡಿ ದಿವಿಜರ ।
ಜಸ್ರದಲಿ ಕಾಯ್ದಿಪ್ಪರಿದರೊಳು ।
ಪ:ಶ್ರುತಿಗಳೈತಪ್ಪವೇ ನಿಜ ಭಕ್ತಿ ಉಳ್ಳವರಿಗೆ ॥ ೧೦ ॥

ನಿಚ್ಚ ನಿಜಜನ ನೆಚ್ಚ ನೆಲೆಗೊಂ ।
ಡಚ್ಚ ಭಾಗ್ಯವು ಪೆಚ್ಚ ಪೇರ್ಮೆಯು ।
ಕೆಚ್ಚ ಕೇಳ್ವನು ಮೆಚ್ಚ ಮಲಮನ ಮುಚ್ಚಲೆಂದೆನುತ ॥
ಉಚ್ಚವಿಗಳಿಗೆ ಪೊಚ್ಚ ಪೊಸದೆನ ।
ಲುಚ್ಚರಿಸಿದೀ ಸಚ್ಚರಿತ್ರೆಯ ।
ನುಚ್ಚರಿಸೆ ಸಿರಿವತ್ಸಲಾಂಛನ ಮೆಚ್ಚಲೇನರಿದು ॥ ೧೧ ॥

ಸಾಧು ಸಭೆಯೊಳು ಮೆರೆಯೆ ತತ್ವ ಸು ।
ಬೋಧ ವೃಷ್ಟಿಯುಗರೆಯೆ ಕಾಮ ।
ಕ್ರೋಧ ಬೀಜವು ಹುರಿಯೆ ಖಳರೆದೆ ಬಿರಿಯೆ ಕರಕರಿಯ ॥
ವಾದಿಗಳ ಪಲ್ಮುರಿಯೆ ಪರಮ ವಿ ।
ನೋದಿಗಳ ಮೈಮರೆಯಲೋಸುಗ ।
ಹಾದಿತೋರಿದ ಹಿರಿಯ ಬಹುಚಾತುರ್ಯ ಹೊಸಪರಿಯ ॥ ೧೨ ॥

ವ್ಯಾಸ ತೀರ್ಥರೊಲಿಮೆಯೋ ವಿಠಲೋ ।
ಪಾಸಕ ಪ್ರಭುವರ್ಯ ಪುರಂದರ ।
ದಾಸರಾಯರ ದಯವೋ ತಿಳಿಯದು ಓದಿ ಕೇಳದಲೆ ॥
ಕೇಶವನ ಗುಣಮಣಿಗಳನು ಪ್ರಾ ।
ಣೇಶಗರ್ಪಿಸಿ ವಾದಿರಾಜರ ।
ಕೋಶಕೊಪ್ಪುವ ಹರಿಕಥಾಮೃತಸಾರ ಪೇಳಿದರು ॥ ೧೩ ॥

ಹರಿಕಥಾಮೃತಸಾರ ನವರಸ ।
ಭರಿತ ಬಹು ಗಂಭೀರ ರತ್ನಾ ।
ಕರ ರುಚಿರ ಶೃಂಗಾರ ಸಾಲಂಕಾರ ವಿಸ್ತಾರ ॥
ಸರಸ ನರ ಕಂಠೀರವಾಖ್ಯಾ ।
ರ್ಯರ ಜನಿತ ಸುಕುಮಾರ ಸಾತ್ವೀ ।
ಕರಿಗೆ ಪರಮೋದಾರ ಮಾಡಿದ ಮರೆಯದುಪಕಾರ ॥ ೧೪ ॥

ಅವನಿಯೊಳು ಜ್ಯೋತಿಷ್ಮತೀ ತೈ ।
ಲವನು ಪಾಮರನುಂಡು ಜೀರ್ಣಿಸ ।
ಲವನೆ ಪಂಡಿತನೋಕರಿಪವಿವೇಕಿಯಪ್ಪಂತೆ ॥
ಶ್ರವಣ ಮಂಗಳ ಹರಿಕಥಾಮೃತ ।
ಸವಿದು ನಿರ್ಗುಣಸಾರ ಮಕ್ಕಿಸ ।
ಲವ ನಿಪುಣನ್ಯೆ ಯೋಗ್ಯಗಲ್ಲದೆ ದಕ್ಕಲರಿಯದಿದು ॥ ೧೫ ॥

ಅಕ್ಕರದೊಳೀ ಕಾವ್ಯದೊಳೊಂ ।
ದಕ್ಕರವ ಬರೆದೋದಿದವ ದೇ ।
ವರ್ಕಳಿಂ ದುಸ್ತ್ಯಜ್ಯನೆನಿಸಿ ಧರ್ಮಾರ್ಥಕಾಮಗಳ ॥
ಲೆಕ್ಕಿಸದೆ ಲೋಕೈಕನಾಥನ ।
ಭಕ್ತಿ ಭಾಗ್ಯವ ಪಡೆವ ಜೀವ ।
ನ್ಮುಕ್ತಗಲ್ಲದೆ ಹರಿಕಥಾಮೃತಸಾರ ಸೊಗಸುವದೆ ॥ ೧೬ ॥

ವತ್ತಿಬಹ ವಿಘ್ನಗಳ ತಡೆದಪ ।
ಮೃತ್ಯುವಿಗೆ ಮರೆಮಾಡಿ ಕಾಲನ ।
ಭೃತ್ಯರಿಗೆ ಭೀಕರವ ಪುಟ್ಟಿಸಿ ಸಕಲ ಸಿದ್ಧಿಗಳ ॥
ಎತ್ತಿಗೊಳ್ಳಿಸಿ ವನರುಹೇಕ್ಷಣ ।
ನೃತ್ಯಮಾಡುವನವನ ಮನೆಯೊಳು ।
ನಿತ್ಯಮಂಗಳ ಹರಿಕಥಾಮೃತಸಾರ ಪಠಿಸುವರ ॥ ೧೭ ॥

ಆಯುರಾರೋಗ್ಯೈಶ್ವರಿಯ ಮಾ ।
ಹಾಯುಶೋ ಧೈರ್ಯ ಬಲ ಸಮು ಸ ।
ಹಾಯ ಶೌರ್ಯೋದಾರ್ಯ ಗುಣಗಾಂಭೀರ್ಯ ಮೊದಲಾದ ॥
ಆಯುತಗಳುಂಟಾಗಲೊಂದ ।
ಧ್ಯಾಯ ಪಠಿಸಿದ ಮಾತ್ರದಿಂ ಶ್ರವ ।
ಣೀಯ ವಲ್ಲದೆ ಹರಿಕಥಾಮೃತಸಾರ ಸುಜನರಿಗೆ? ॥ ೧೮ ॥

ಕುರುಡ ಕಂಗಳ ಪಡೆವ ಬಧಿರನಿ ।
ಗೆರಡು ಕಿವಿ ಕೇಳ್ಬಹವು ಬೆಳಯದ ।
ಮುರುಡ ಮದನಾಕೃತಿಯ ತಾಳ್ವನು ಕೇಳ್ದ ಮಾತ್ರದಲಿ ॥
ಬರಡು ಹೈನಾಗುವದು ಪೇಳ್ದರೆ ।
ಕೊರಡು ಪಲ್ಲೈಸುವದು ಪ್ರತಿ ದಿನ ।
ಹುರುಡಿಲಾದರು ಹರಿಕಥಾಮೃತಸಾರವನು ಪಠಿಸೆ ॥ ೧೯ ॥

ನಿರ್ಜರ ತರಂಗಿಣಿಯೊಳನುದಿನ ।
ಮಜ್ಜನಾದಿ ಸಮಸ್ತ ಕರ್ಮ ವಿ ।
ವರ್ಜಿತಾಶಾಪಾಶದಿಂದಲಿ ಮಾಡಿದಧಿಕ ಫಲ ॥
ಹೆಜ್ಜೆ ಹೆಜ್ಜೆಗೆ ದೊರೆಯದಿಪ್ಪವೆ ।
ಸಜ್ಜನರು ಶಿರತೂಗುವಂದದಿ ।
ಘರ್ಜಿಸುತಲೀ ಹರಿಕಥಾಮೃತಸಾರ ಪಠಿಸುವರ ॥ ೨೦ ॥

ಸತಿಯರಿಗೆ ಪತಿಭಕುತಿ ಪತ್ನೀ ।
ವ್ರತ ಪುರುಷರಿಗೆ ಹರುಷ ನೆಲೆಗೊಂ ।
ಡತಿ ಮನೋಹರರಾಗಿ ಗುರು ಹಿರಿಯರಿಗೆ ಜಗದೊಳಗೆ ॥
ಸತತ ಮಂಗಳವೀವ ಬಹು ಸು ।
ಕೃತಿಗಳೆನಿಸುತ ಸುಲಭದಿಂ ಸ ।
ದ್ಗತಿಯ ಪಡೆವರು ಹರಿಕಥಾಮೃತಸಾರವನು ಪಠಿಸೆ ॥ ೨೧ ॥

ಎಂತು ಬಣ್ಣಿಸಲೆನ್ನಳವೆ ಭಗ ।
ವಂತನಮಲ ಗುಣಾನುವಾದಗ ।
ಳೆಂತು ಪರಿಯಲಿ ಪೂರ್ಣಬೋಧರ ಮತವ ಪೊಂದಿದರ ॥
ಚಿಂತನಗೆ ಬಪ್ಪಂತೆ ಬಹು ದೃ ।
ಷ್ಟಾಂತ ಪೂರ್ವಕವಾಗಿ ಪೇಳ್ದ ಮ ।
ಹಂತರಿಗೆ ನರರೆಂದು ಬಗೆವರೆ ನಿರಯ ಭಾಗಿಗಳು ॥ ೨೨ ॥

ಮಣಿಖಚಿತ ಹರಿವಾಣದೊಳು ವಾ ।
ರಣ ಸುಭೋಜ್ಯ ಪದಾರ್ಥ ಕೃಷ್ಣಾ ।
ರ್ಪಣವೆನುತ ಪಸಿದವರಿಗೋಸುಗ ನೀಡುವಂದದಲಿ ॥
ಪ್ರಣತರಿಗೆ ಪೊಂಗನಡ ವರ ವಾ ।
ಙ್ಮಣಿಗಳಿಂ ವಿರಚಿಸಿದ ಕೃತಿಯೊ ।
ಳುಣಿಸಿ ನೋಡುವ ಹರಿಕಥಾಮೃತಸಾರ ವನುದಾರ ॥ ೨೩ ॥

ದುಷ್ಟರೆನ್ನದೆ ದುರ್ವಿಷಯದಿಂ ।
ಪುಷ್ಟರೆನ್ನದೆ ಪೂತಕರ್ಮ ।
ಭ್ರಷ್ಟರೆನ್ನದೆ ಶ್ರೀದವಿಠಲ ವೇಣುಗೋಪಾಲ ॥
ಕೃಷ್ಣ ಕೈಪಿಡಿವನು ಸುಸತ್ಯ ವಿ ।
ಶಿಷ್ಟ ದಾಸತ್ವವನು ಪಾಲಿಸಿ ।
ನಿಷ್ಠೆ ಇಂದಲಿ ಹರಿಕಥಾಮೃತಸಾರ ಪಠಿಸುವರ ॥ ೨೪ ॥

॥ ಇತಿ ಶ್ರೀ ಕರ್ಜಿಗಿ ದಾಸರಾಯ ವಿರಚಿತ ಫಲಶ್ರುತಿ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥